ತೊದಲ್ನುಡಿ ಗ್ರಂಥಮಾಲೆ— ನುಡಿ ೧೭

# ನಾರೀ ಹೃದಯ



ಲೇಖಿಕೆಯರು:

**ಶ್ರೀಮತಿ ಶಿವರಾಣಿ ದೇವಿ.**

(ಸ್ವರ್ಗೀಯ ಪ್ರೇಮಚಂದ್ರರ ಧರ್ಮಪತ್ನಿ)

---

ಅನುವಾದಕರು:

**ಶ್ರೀ. ಎಸ್. ಎಲ್. ಸುಬ್ರಹ್ಮಣ್ಯಂ**

ಕೊಡಗನೂರು

(ಮೈಸೂರು ಸಂಸ್ಥಾನ)

.........

ಪ್ರಕಾಶಕರು:

**ಕಿರಿಯರ ಪ್ರಪಂಚ, ಉಡುಪಿ.**

೧ ೮ ೦

ಸಂಪಾದಕ:
**ಕೆ. ಹೊನ್ನಯ್ಯ ಶೆಟ್ಟಿ.**



## ಸಮರ್ಪಣೆ

ನನಗೆ ನನ್ನ ಅತ್ತೆಯವರ ದರ್ಶನದ ಸೌಭಾಗ್ಯವು ದೊರೆಯಲಿಲ್ಲ ನನ್ನ ವಿವಾಹಕ್ಕೆ ಬಹಳ ಮೊದಲೇ ಅವರು ಸ್ವರ್ಗಸ್ಥರಾಗಿಬಿಟ್ಟಿದ್ದರು. ಅವರು ಜೀವಿಸಿದ್ದಿದ್ದರೆ, ಈ ತುಚ್ಛ ರಚನೆಯನ್ನು ಅವರ ಚರಣಗಳಿಗೆ ಅರ್ಪಿಸುತ್ತಿದ್ದೆನೋ ಇಲ್ಲವೋ ಹೇಳಲಾರೆನು ಈಗಂತೂ ಅವರಲ್ಲಿ ನನಗೆ ಅಖಂಡವಾದ ಶ್ರದ್ಧೆ; ಇದೆ. ಏಕೆಂದರೆ ನಾನು ಅವರನ್ನು ದುಃಖದಾಯಿನಿಯಾದ ಅತ್ತೆಯ ರೂಪಿನಲ್ಲಿ ನೋಡದೆ, ವಾತ್ಸಲ್ಯರೂಪೀ ತಾಯಿಯಂತೆ ನೋಡುತ್ತಿದ್ದೇನೆ. ನಾನು ಅವರ ಜೀವಿತಕಾಲದಲ್ಲಿ ಅವರ ಸ್ವಲ್ಪ ಸೇವೆಯನ್ನೂ ಮಾಡಲಾರದೆ ಹೋದೆ. ಈ ರಚನೆಯನ್ನು ಅವರ ಚರಣಗಳಲ್ಲಿಟ್ಟು ಅವರ ಆತ್ಮಕ್ಕೆ ಆನಂದವನ್ನುಂಟುಮಾಡುವೆನೆಂಬ ಆಸೆ ಇದೆ.

—ಶಿವರಾಣಿ

ಮುದ್ರಕರು:
**ನವಯುಗ ಪ್ರೆಸ್**
ಉಡುಪಿ.

ವಿಕ್ರಯಾಧಿಕಾರಿಗಳು:
**ನವಭಾರತ ಪುಸ್ತಕಭಂಡಾರ**
ಉಡುಪಿ.

# ಪೀಠಿಕೆ

ಈ ಪುಸ್ತಕವು ತೊದಲ್ನುಡಿ ಗ್ರಂಥಮಾಲೆಯ ೧೭ ನೆಯ ನುಡಿ. ಇದರಲ್ಲಿ ಶ್ರೀಮತಿ ಶಿವರಾಣಿ ದೇವಿಯವರ ಹದಿನಾಲ್ಕು ಉತ್ತಮ ಕತೆಗಳ ಸಂಗ್ರಹವಿದೆ. ಪ್ರತಿಯೊಂದು ಕತೆಯೂ ಒಂದಲ್ಲ ಒಂದು ಉಚ್ಚ ಆದರ್ಶವನ್ನು ಇಟ್ಟುಕೊಂಡೇ ಬರೆಯಲ್ಪಟ್ಟಿದೆ. ಚಿರಕಾಲದಿಂದ ಪುರುಷ ಸಮಾಜವು ಸ್ತ್ರೀಜಾತಿಯನ್ನು ಹೀನವರ್ಗವೆಂದು ಭಾವಿಸುತ್ತ ಅದರ ರಕ್ಷಣೆ ಪೋಷಣೆ, ಸ್ಥಾನಮಾನಗಳ ವಿಷಯಗಳಲ್ಲಿ ತಿರಸ್ಕಾರ ದೃಷ್ಟಿ ಬೀರುವ ಚಟಕ್ಕೆ ಕಟ್ಟುಬಿದ್ದಿದೆ. ಇದರಿಂದಾಗಿ ಸ್ತ್ರೀಯ ಹೃದಯ ಬುದ್ಧಿಗಳನ್ನು ಕಾಣುವ ನಮ್ಮ ಕಣ್ಣು ಕುರುಡಾಗುತ್ತ ಬರುತ್ತಲಿದೆ. ಇದಕ್ಕೆ ತಕ್ಕ ಅಂಜನವು ಈ ಕಥಾಮಾಲೆ. ಸ್ತ್ರೀಯರಲ್ಲಿಯೂ ಸಾಹಸ, ಸ್ನೇಹ, ದೇಶಭಕ್ತಿ, ತ್ಯಾಗ, ಬಲಿದಾನಾದಿ ಗುಣಗಳು ಪುರುಷರಿಗಿಂತ ಅಧಿಕವಾಗಿಲ್ಲದಿದ್ದರೂ, ಸಮಾನ ಪ್ರಮಾಣದಲ್ಲಾದರೂ ಇದ್ದೇ ಇವೆ ಎಂಬುದನ್ನು ಈ ಲೇಖಿಕೆಯರು ಚೆನ್ನಾಗಿ ಚಿತ್ರಿಸಿ ತೋರಿಸಿದ್ದಾರೆ. ಸ್ವಯಂ ಶ್ರೀ ಪ್ರೇಮಚಂದ್ರರು ಸಹ ಭಾರತೀಯ ಲಲನೆಯರ ಚರಿತ್ರ ಚಿತ್ರಣವನ್ನು ಇಷ್ಟು ಸಫಲತೆಯಿಂದ ಮಾಡಿರಲಿಕ್ಕಿಲ್ಲ.

ಇಂತಹ ಉತ್ತಮ ಕಥಾ ಸಂಗ್ರಹದ ಪ್ರಯೋಜನವು ಕನ್ನಡಿಗರಿಗೂ ಆಗಲೆಂಬ ಉದ್ದೇಶದಿಂದಲೆ ಇದನ್ನು ಪ್ರಕಟಿಸಿದ್ದೇವೆ. ಕನ್ನಡನಾಡಿನ ಸ್ತ್ರೀ ಪುರುಷರು ಇದನ್ನು ಓದಿ, ಆದಷ್ಟು ಪ್ರಯೋಜನವನ್ನು ಪಡೆದರೆ ನಮ್ಮ ಶ್ರಮ ಸಾರ್ಥಕವಾಯಿತೆಂದು ಭಾವಿಸುವೆವು ಇದನ್ನು ಅನುವಾದಿಸಲು ಸಮ್ಮತಿಯನ್ನು ಕೊಟ್ಟುದಕ್ಕಾಗಿ ಇದರ ಹಿಂದೀ ಪ್ರಕಾಶಕರಾದ ಬೆನರಸಿನ ಸರಸ್ವತಿ ಪ್ರೆಸ್ಸಿನ ಒಡೆಯರಿಗೆ ನಮ್ಮ ಕೃತಜ್ಞತೆಗಳನ್ನರ್ಪಿಸುತ್ತೇವೆ. ಶ್ರೀ ಸುಬ್ರಹ್ಮಣ್ಯರು ಇದನ್ನು ಕನ್ನಡಿಸಿದ್ದಾರೆ. ಆ ಬಗ್ಗೆ ಅವರಿಗೂ ನಾವು ಆಭಾರಿಗಳಿದ್ದೇವೆ.

ಮಾರ್ಚಿ
೧೯೪೩ } ಪ್ರಕಾಶಕರು

# ನಾರೀ ಹೃದಯ

---

## ಅನುಕ್ರಮಣಿಕೆ

# ನಾರೀ ಹೃದಯ

## ೧ ನಾರೀ ಹೃದಯ

೧

ಕರ್ಮವೀರಸಿಂಹನು ಆಗ್ರಾದಲ್ಲಿ ಪೋಲೀಸ್ ಅಧಿಕಾರಿಯಾಗಿದ್ದನು. ಪೋಲೀಸು ಇಲಾಖೆಯಲ್ಲಿದ್ದರೂ ಕೂಡ ಅವನು ಯಾವಾಗಲೂ ನಿಜವನ್ನೇ ನುಡಿಯುತಿದ್ದನು ದುಃಖಿತರನ್ನು ಕಂಡರೆ ಅವನ ಹೃದಯವು ಕರುಗುತ್ತಿತ್ತು. ಸುಖದಿಂದಿರುವವರನ್ನು ನೋಡಿದಾಗ, ಅವನೂ ಸಂತೋಷಪಡುತ್ತಿದ್ದನು. ಆದರೆ ಅವನಿಗೆ ಗಂಡು ಮಕ್ಕಳಿರಲಿಲ್ಲ. ಅದಕ್ಕಾಗಿ ಅವನು ಯಾವಾಗಲೂ ವ್ಯಸನದಿಂದಿರುತ್ತಿದ್ದನು ಅವನಿಗೆ ಪ್ರಭೆ ಎಂಬ ಒಬ್ಬ ಮಗಳಿದ್ದಳು. ಅವಳನ್ನು ಯಾವಾಗಲೂ ತನ್ನ ಬಳಿಯಲ್ಲಿಯೇ ಇರಬಲ್ಲ ಯಾವನಿಗಾದರೂ ಕೊಟ್ಟು ವಿವಾಹ ಮಾಡಬೇಕೆಂದು ಯೋಚಿಸುತ್ತಿದ್ದನವನು.

ಸಿಂಹನ ಪತ್ನಿಯ ಹೆಸರು ಶಾಂತದೇವಿ. ಅವನು ತನ್ನ ಪತ್ನಿಯೊಡನೆ "ನಾನು ನನ್ನ ಮಗಳನ್ನು ಯಾರಿಗಾದರೂ ಕೊಟ್ಟು ಮದುವೆ ಮಾಡುವೆನು ಅಳಿಯನಿಗೆ ನನ್ನ ಐಶ್ವರ್ಯವನ್ನು ಕೊಡುವೆನು. ಆಗ ಅವನು ನನ್ನ ಬಳಿ ಇರುವುದಕ್ಕೆ ಒಪ್ಪದೇ ಏನು?" ಎನ್ನುತ್ತಿದ್ದನು.

೦೦ ೦೦ ೦೦

ಆಗ್ರಕ್ಕೆ ಸಮೀಪದ ಒಂದು ಹಳ್ಳಿಯಲ್ಲಿ ಗರೀಬ್ ಸಿಂಹನೆಂಬ ಒಬ್ಬ ಜಮೀನ್ದಾರನಿದ್ದನು. ಕರ್ಮವೀರಸಿಂಹನು ಗರೀಬ್ ಸಿಂಹನ ಬಳಿಗೆ ಹೋದಾಗಲೆಲ್ಲಾ, ಅವನು ಇವನನ್ನು ತುಂಬ ಮರ್ಯಾದೆಯಿಂದ ಸತ್ಕರಿಸುತ್ತಿದ್ದನು. ಇಬ್ಬರೂ ಬಹಳ ಸ್ನೇಹದಿಂದಿದ್ದರು ಗರೀಬ್ ಸಿಂಹನ ಮನೆಯಲ್ಲಿ ಸಹ ಮೂರೇ ಮಂದಿ ಇದ್ದರು ಗರೀಬ್ ಸಿಂಹ, ಅವನ ಪತ್ನಿ ಮತ್ತು ವಿಜಯಸಿಂಹನೆಂಬ ೧೨ ವರ್ಷದ ಒಬ್ಬನೇ ಮಗ.

ವಿಜಯನು ದೃಢಾಂಗನಾದ ಬಾಲಕ, ಹಸನ್ಮುಖಿ, ವಿಶಾಲವಾದ ನೇತ್ರಗಳು, ಅಗಲವಾದ ಎದೆ, ತನ್ನನ್ನು ನೋಡಿದವರನ್ನು ಆಕರ್ಷಿಸತಕ್ಕ ಮುಖಾಕೃತಿ.

ಗರೀಬ್ ಸಿಂಹನ ಗೃಹಕೃತ್ಯಕ್ಕೆ ಬಹಳ ಹಣಬೇಕಾಗುತ್ತಿತ್ತು; ಅತಿಥಿ ಸತ್ಕಾರವು ಪ್ರತಿದಿನವೂ ಇದ್ದೇ 'ಇರುತ್ತಿತ್ತು. ಅವನು ಒಂದು ಟಾಂಗಾ ಮತ್ತು ಎರಡು ಕುದುರೆಗಳನ್ನು ಸಹ ಇಟ್ಟಿದ್ದನು.

ಲಗ್ನ ಋತುವಿನಲ್ಲಿ ನಾಲ್ಕಾರು ಜನರು ವಿಜಯನ ಮದುವೆಯ ವಿಷಯವನ್ನು ಚರ್ಚಿಸಲು ಬರುತ್ತಿದ್ದರು. ಎಲ್ಲರಿಗೂ ಆತಿಥ್ಯ ನಡೆಯುತ್ತಿತ್ತು- ಆದರೆ ಎಲ್ಲರಿಗೂ 'ನಕಾರ'ದ ಉತ್ತರವೇ ದೊರೆಯುತ್ತಿತ್ತು ವಿಜಯನು ಬಿ. ಎ ಪಾಸ್ಮಾಡದ ಹೊರತು ಆವನ ವಿವಾಹವನ್ನು ಮಾಡಬಾರದೆಂದು ಗರೀಬ್‌ಸಿಂಹನ ಇಚ್ಛೆಯಾಗಿತ್ತು

ಕರ್ಮವೀರ ಸಿಂಹನ ಮನಸ್ಸೇನೋ ವಿಜಯನ ಮೇಲಿತ್ತಾದರೂ ಅವನು ಜಮೀನ್ದಾರನ ಮಗ, ಮತ್ತು ಒಬ್ಬನೇ ಮಗನಾದುದರಿಂದ, ತಮ್ಮ ಮನೆಗೆ ಬಂದು ನಿಲ್ಲುವುದು ಅಸಂಭವವೆಂಬ ಅನುಮಾನವಿತ್ತು.

೨

ಅದೇ ಸಮಯದಲ್ಲಿ ನಗರದಲ್ಲಿ ಪ್ಲೇಗಿನ ಉಪದ್ರವವುಂಟಾಯಿತು ಗರೀಬ್ ಸಿಂಹನಿಗೆ ಜ್ವರ ಬಂದಿತು ರಾತ್ರಿ ೯ ಗಂಟೆ ವೇಳೆಗೆ ಗಡ್ಡೆಯೊ ಕಾಣಿಸಿಕೊಂಡಿತು. ಅವನ ಪತ್ನಿ ಯಾದ ನಿರ್ಮಲಾದೇವಿಯು ಬಹಳ ಗಾಬರಿಯಾದಳು. ಮಗನ ಬಳಿ ಬಂದು —“ ವಿಜಯ, ನಿನ್ನ ತಂದೆಯವರ ಸ್ಥಿತಿಯು ಕೆಡುತ್ತ ಇದೆ. ಬೇಗ ಹೋಗಿ ಕರ್ಮವೀರ ಸಿಂಹರನ್ನೂ, ಡಾಕ್ಟರ್ ಒಬ್ಬರನ್ನೂ ಕರೆದುಕೊಂಡು ಬಾ” ಎಂದು ಹೇಳಿದಳು.

ಸ್ವಲ್ಪ ಹೊತ್ತಿನಲ್ಲಿ ವಿಜಯನು, ಕರ್ಮವೀರಸಿಂಹ ಮತ್ತು ಸಿವಿಲ್ ಸರ್ಜನರೊಡನೆ ಬಂದನು. ಬಾಗಿಲಲ್ಲಿ ಊರಿನವರೆಲ್ಲ ನೆರೆದಿದ್ದರು, ರೋದನ ಶಬ್ದವು ಕೇಳಿಬರುತ್ತಿತ್ತು. ಡಾಕ್ಟರರು ಬರುವುದಕ್ಕೆ ಮೊದಲೇ ಗರೀಬ್ ಸಿಂಹನು ಮೃತಪಟ್ಟಿದ್ದನು.

ಹದಿಮೂರು ದಿನಗಳ ವರೆಗೆ ಕರ್ಮವೀರ ಸಿಂಹನು ಪ್ರತಿದಿನವೂ ಗರೀಬ್ ಸಿಂಹನ ಮನೆಗೆ ಹೋಗಿ, ನಿರ್ಮಲಾದೇವಿ ಮತ್ತು ವಿಜಯರ

ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬರುತ್ತಿದ್ದನು. ಕ್ರಿಯಾಕರ್ಮ ಗಳು ಮುಗಿದ ನಂತರ, ಹದಿನಾಲ್ಕನೆ ದಿನ ನಿರ್ಮಲಾದೇವಿಯು ಅವ ರನ್ನು ಒಳಗೆ ಕರೆದು, ಅಳುತ್ತಾ ಹೀಗೆಂದಳು—"ಅಣ್ಣಾ, ಇನ್ನು ನಮ್ಮ ಗತಿ ಏನು? ನಿಮ್ಮ ತಮ್ಮಂದಿರು ತುಂಬಿದ ನೌಕೆಯನ್ನು ನಡುನೀರಿ ನಲ್ಲಿ ಬಿಟ್ಟು ಹೊರಟು ಹೋದರಲ್ಲ!"

ಕರ್ಮವೀರ ಸಿಂಹನು ಕಣ್ಣಿನಲ್ಲಿ ನೀರು ತುಂಬಿಕೊಂಡು ಉತ್ತರ ವಿತ್ತನು -"ಈಶ್ವರನೇ ಎಲ್ಲರ ಕಷ್ಟಗಳನ್ನೂ ನಿವಾರಿಸತಕ್ಕವನು ನಾನು ಜೀವಿಸಿರುವ ತನಕ ನಿಮಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಳ್ಳುವೆನು. ಅಣ್ಣನು ಸಾಲವನ್ನೇನೂ ಮಾಡಿಲ್ಲ ತಾನೇ? ಅವರು ಆದರ ಸುದ್ದಿಯನ್ನು ನನ್ನೊಡನೆ ಹೇಳಿರಲಿಲ್ಲ"

ನಿರ್ಮಲಾ ದೇವಿ—"ಅಯ್ಯೋ, ಅದನ್ನೇಕೆ ಕೇಳುವಿರಿ? ಅವರು ಮಾನಕ್ಕೆ ಅಂಜಿ, ಯಾರೊಡನೆಯೂ ಹೇಳಿರಲಿಲ್ಲ. ಐದಾರು ಮಂದಿ ಅತಿಥಿಗಳಿಲ್ಲದ ದಿನವೇ ಇಲ್ಲ. ಚಂದಾ ಕೇಳುವವರು ಬೇರೆ"

ಕರ್ಮವೀರನು ಕಾಗದ ಪತ್ರಗಳನ್ನು ನೋಡಿ ವಿಸ್ಮಿತನಾದನು. ಪರಿಸ್ಥಿತಿಯು ಅತ್ಯಂತ ಪ್ರತಿಕೂಲವಾಗಿತ್ತು. ಆದರೂ ಕರ್ಮವೀರ ಸಿಂಹನು ಗರೀಬ್ ಸಿಂಹನ ಆಸ್ತಿಯನ್ನು ಮಾರಿ ಅವರಿಗಿದ್ದ ಸಾಲವ ನ್ನೆಲ್ಲಾ ತೀರಿಸಿಬಿಟ್ಟನು. ೩೦ ಎಕರೆ ಜಮೀನು ಉಳಿಯಿತು ಆಗ ಅವನು ವಿಜಯನ ವಿದ್ಯಾಭ್ಯಾಸದ ವೆಚ್ಚಕ್ಕೇನುಮಾಡಬೇಕೆಂದು ಕೇಳಲು, ನಿರ್ಮಲಾ ದೇವಿಯು, ಅವನನ್ನು ತಮ್ಮ ಬಳಿಯಲ್ಲೇ ಇಟ್ಟು ಕೊಳ್ಳಿ ಎಂದುಬಿಟ್ಟಳು. ಆಗ ಗರೀಬ್‌ಸಿಂಹನು "ನೀವು ಸಹ ನಮ್ಮ ಬಳಿಯಲ್ಲೇ ಬಂದು ಇರಬಹುದಲ್ಲಾ" ಎಂದಾಗ ನಿರ್ಮಲಾ ದೇವಿಯು "ಬೇಡಿ, ನಾನು ಹೇಗೂ ನಿರ್ವಹಿಸಿಕೊಳ್ಳುತ್ತೇನೆ. ನಾನು ನಿಮ್ಮ ಬಳಿ ಇರುವುದು ಸರಿಯಲ್ಲ. ಕಾಲ ಕೆಟ್ಟಿದೆ. ಜನರು ಮನಬಂದಂತೆ ಮಾತನಾಡಿಕೊಳ್ಳುವರು" ಎಂದಳು. ಕರ್ಮವೀರನು ವಿಜಯನನ್ನು ತನ್ನೊಡನೆ ಕರೆದುಕೊಂಡು ಹೋಗುವಾಗ, ನಿರ್ಮಲಾ ದೇವಿಯು ರೋದಿಸುತ್ತಾ "ಈ ದಿನ ನನ್ನ ಪತಿಯು ಜೀವಿಸಿದ್ದಲ್ಲಿ, ಇದ್ದ ಒಬ್ಬ

ಮಗನನ್ನು ಇತರರ ಮನೆಗೆ ಕಳುಹಿಸುತ್ತಿದ್ದರೇ!" ಎಂದು ಬೇಗುದಿಗೊಂಡಳು.

ವಿಜಯ ಮತ್ತು ಕರ್ಮವೀರ ಸಿಂಹರು ಹೊರಟರು. ಶಾಂತಾದೇವಿಯು "ನಿರ್ಮಲಕ್ಕ ಒಬ್ಬಳನ್ನೇ ಬಿಟ್ಟು ಬಂದುಬಿಟ್ಟಿರಾ?" ಎಂದು ಕೇಳಿದಳು.

ಕರ್ಮವೀರ—"ಇನ್ನೇನು ಮಾಡಲಿ? ೩೦ ಎಕರೆ ಭೂಮಿ ಉಳಿದಿದೆ. ಅದರಿಂದ ಅವರ ಜೀವನವಂತೂ ನಡೆದು ಹೋಗುತ್ತದೆ. ವಿಜಯನಿಗೆ ವಿದ್ಯಾಭ್ಯಾಸ ಮಾಡಿಸುವುದಕ್ಕಾಗಿ ನನ್ನ ಸಂಗಡ ಕರೆದುಕೊಂಡು ಬಂದಿದ್ದೇನೆ."

ಶಾಂತ—"ಒಳ್ಳೇದೇ ಆಯಿತು. ಪ್ರಭೆಗೂ ಒಡನಾಡಿ ಸಿಕ್ಕಂತಾಯಿತು. ಇಬ್ಬರೂ ಒಟ್ಟಿಗೇ ಓದುವರು."

೩

ಪ್ರಭೆ ಮತ್ತು ವಿಜಯರ ನಡುವೆ ಬಹಳ ಪ್ರೇಮವಿದೆ. ಇಬ್ಬರೂ ಆನಂದವಾಗಿ ಕಾಲಕಳೆಯುತ್ತಿದ್ದಾರೆ.

ಒಂದು ದಿನ ವಿಜಯನು ತಡಮಾಡಿ ಮನೆಗೆ ಬಂದನು. ಪ್ರಭೆಯು ತಾಯಿಯೊಡನೆ "ಅಮ್ಮಾ, ಅಣ್ಣನು ಇಷ್ಟು ಹೊತ್ತಾದರೂ ಬರಲೇ ಇಲ್ಲವಲ್ಲ" ಎಂದು ಅಳುತ್ತಾ ಹೇಳಿದಳು.

ತಾಯಿ—"ಬರ್ತ ಇರಬಹುದು, ಇಷ್ಟೇಕೆ ಗಾಬರಿಯಾಗುವೆ?"

ಪ್ರಭೆ—"ನನಗೇನೋ ಬಹಳ ಹೆದರಿಕೆ ಆಗ್ತಾ ಇದೆ".

ಶಾಂತ—"ಅವನಿಲ್ಲದಾಗ ಹೇಗಿದ್ದೆ? ಇವತ್ತು ವಿಜಯ ಬರ್ಲಿ, ಇರು, ನೀನಿಲ್ಲದಾಗ ಪ್ರಭೆಗೆ ಹೆದರಿಕೆಯಾಗುತ್ತಂತೆ-ಎಂದು ಹೇಳ್ತೀನಿ".

ಪ್ರಭೆ—"ಬೇಡಮ್ಮ, ಅವರಿಗೆ ಏನೂ ಹೇಳಬೇಡ".

ರಾತ್ರಿ ವಿಜಯನು ಬಂದಾಗ, ತಡಮಾಡಿ ಬರಲು ಕಾರಣವೇನೆಂದು ಶಾಂತಾದೇವಿಯು ಕೇಳಿದಳು. ಆದಕ್ಕೆ ವಿಜಯನು ತಮ್ಮ ಉಪಾಧ್ಯಾಯರೊಬ್ಬರಿಗೆ ವರ್ಗವಾಗಲು, ಅವರನ್ನು ಬೀಳ್ಕೊಡುವುದಕ್ಕಾಗಿ ಸ್ಟೇಶನ್ನಿಗೆ ಹೋಗಿದ್ದುದರಿಂದ ತಡವಾಯಿತೆಂದು ಹೇಳಿದನು.

ಈ ರೀತಿ ಐದು ವರ್ಷಗಳು ಕಳೆದುವು.

ಒಂದು ದಿನ ಶಾಂತಾ ದೇವಿಯು ಪತಿಯೊಡನೆ 'ನಾನಂತೂ ಪ್ರಭೆಗೆ ಒಬ್ಬ ವರನನ್ನು ಪತ್ತೆಮಾಡಿಕೊಂಡಿದ್ದೇನೆ'' ಎಂದಳು.

ಕರ್ಮವೀರ—''ನನಗೂ ಸ್ವಲ್ಪ ಹೇಳಬಾರದೇ? ಯಾರದು?''

ಶಾಂತ--(ನಗುತ್ತ) ''ಇನ್ನಾರು, ವಿಜಯನೇ. ಹಣವಿಲ್ಲದಿದ್ರೆ ಹೋಗ್ಲಿ, ಎಲ್ಲಿದ್ರೂ ಹೊಟ್ಟೆಬಟ್ಟೆಗೆ ನಿಶ್ಚಿಂತೆಯಿಂದಿವರು. ನಿಮ್ಮ ಅಭಿಪ್ರಾಯವೇನು?"

ಕರ್ಮವೀರ—''ನನಗೇನೊ ಸಂಪೂರ್ಣ ಒಪ್ಪಿಗೆ. ನಿರ್ಮಲಾ ದೇವಿಗೆ ಪತ್ರಬರೆದು ನೋಡೋಣ"

ನಿರ್ಮಲಾ ದೇವಿಯು ಶಾಂತಳ ಪತ್ರವನ್ನು ನೋಡಿ ಅತ್ಯಂತ ಸಂತೋಷಪಟ್ಟು "ಹುಡುಗನು ನಿಮ್ಮವನೇ. ಇದಕ್ಕಿಂತ ನನಗಿನ್ನೇನು ಬೇಕು?" ಎಂದು ಉತ್ತರ ಬರೆದಳು.

೪

ವಿಜಯನೀಗ ಬಿ. ಎ. ಆಗಿದ್ದಾನೆ. ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾದುದರಿಂದ ಗೋರಖ್ ಪುರದ ತಹಸೀಲ್‌ದಾರ್ ಕೆಲಸ ಸಿಕ್ಕಿತು. ನಾಳೆಯೇ ಕೆಲಸಕ್ಕೆ ಸೇರಬೇಕಾಗಿದೆ. ಆದರೆ ವಿಜಯನ ವಿಯೋಗದಿಂದ ಇರಲು ಸಾಧ್ಯವಿಲ್ಲವೆಂದು ಪ್ರಭೆಯು ಅಳಹತ್ತಿದ್ದಾಳೆ. ರಾತ್ರಿ ನಿದ್ದೆ ಇಲ್ಲ ಯಾವಾಗಲೂ ಅನಿಷ್ಟವನ್ನೇ ಕುರಿತು ಚಿಂತಿಸುತ್ತಿದ್ದಾಳೆ. ಅದನ್ನು ಕಂಡು ವಿಜಯನು ''ಪ್ರಭಾಮಣಿ, ಇದೇನಿದು? ಹೀಗೇಕೆ ಅಳುವೆ? ಪ್ರತಿ ತಿಂಗಳಲ್ಲೂ ನಾಲ್ಕೈದು ದಿನ ಇಲ್ಲಿಗೆ ಬರುವೆನು. ಅಲ್ಲದೆ ಗೋರಖ್ ಪುರವು ಇರುವುದಾದರೂ ಎಷ್ಟು ದೂರ? ನಿತ್ಯವೂ ಕಾಗದ ಬರೆಯುವೆನು" ಎಂದು ಹೇಳಿ ಸಮಾಧಾನ ಪಡಿಸಿದನು. ಆದರೂ ಪ್ರಭೆಗೆ ಸಮಾಧಾನವಾಗದೆ "ನನ್ನ ಮನಸ್ಸಿನಲ್ಲಿ ನೀವು ನನ್ನನ್ನು ಮರೆತುಬಿಡುವಿರೋ ಏನೋ ಎಂಬ ಭಯವುಂಟಾಗಿದೆ'' ಎಂದಳು.

ವಿಜಯ—"ಏನೆಂದೆ? ಜೀವವಿರುವತನಕ ನಿನ್ನನ್ನು ಮರೆಯಲಾರೆ ಪ್ರಭಾ! ನಿನ್ನನ್ನು ಬಿಟ್ಟು ಹೋಗಲು ನನಗೇ ಮನಸ್ಸಿಲ್ಲ. ಏನು ಮಾಡಲಿ, ಉಪಾಯವಿಲ್ಲ. ನಿನ್ನನ್ನು ಕರೆದುಕೊಂಡು ಹೋಗೋಣ ಅನ್ನಿಸುತ್ತದೆ.''

ಪ್ರಭೆ—"ತಂದೆತಾಯಿಗಳನ್ನು ಕೇಳಿನೋಡಿ, ಏನು ಹೇಳು ತ್ತಾರೋ?"

ವಿಜಯ—"ಈ ಸಾರಿ ನನ್ನನ್ನು ಬೀಳ್ಕೊಡು. ನಾನು ಬಹಳ ಬೇಗ ಬರುವೆನು. ಪ್ರತಿದಿನವೂ ಪತ್ರಬರೆಯಬೇಕು, ತಿಳಿಯಿತೆ?"

ಮಾರನೆ ದಿನ ಎಲ್ಲರ ಆಶೀರ್ವಾದವನ್ನು ಪಡೆದು ವಿಜಯನು ಹೊರಟನು. ಪ್ರಭೆಯ ಕೋಣೆಗೆ ಹೋಗಲು ಅವಳು ತನ್ನ ತಲೆಯನ್ನು ಆತನ ಚರಣಗಳಲ್ಲಿಟ್ಟು, ಅಳಲಾರಂಭಿಸಿದಳು. ವಿಜಯನೂ ಅತ್ತನು. ನಂತರ ಬಹಳ ವ್ಯಸನದಿಂದ ಹೊರಟನು.

— ೫ —

ವಿಜಯನು ಹೊರಟುಹೋದ ಬಳಿಕ ಪ್ರಭೆಯ ಹೃದಯವು ನಡುಗ ಲಾರಂಭಿಸಿತು ಶಾಂತೆಯ ತಂಗಿಯ ಮಗಳಾದ ತಾರೆಜೂಡನೆ ಪ್ರಭೆಯು ಕಾಲಕಳೆಯಲಾರಂಭಿಸಿದಳು. ತಾರೆಯ ಪತಿಯು ಕಳೆದ ವರ್ಷ ಮೃತಪಟ್ಟಿದ್ದನು. ಒಂದು ತಿಂಗಳ ನಂತರ ವಿಜಯನು ಬಂದನು.

ಒಂದು ಸಾರಿ ವಿಜಯನು ಕರ್ಮವೀರನೊಡನೆ—"ಬಾಬುಜಿ, ನಾನಲ್ಲಿ ಒಬ್ಬನೇ ಇರಲಾರೆ. ಅಪ್ಪಣೆಯಾದರೆ ಪ್ರಭೆಯನ್ನೂ ಕರೆದು ಕೊಂಡು ಹೋಗುವೆನು" ಎಂದನು

ಕರ್ಮ—"ಅವಳು ಹೋದರೆ, ನಮಗೂ ಇಲ್ಲಿರಲಾಗುವು ದಿಲ್ಲವಲ್ಲ!"

ವಿಜಯನು ಗೋರಖ್‌ಪುರಕ್ಕೆ ಹಿಂದಿರುಗಿದನು. ಆದರೆ ಈ ಸಾರಿ ಅವನ ಮನಸ್ಸೇ ಬದಲಾಯಿಸಿತು ಕಾಗದ ಬರೆಯುವುದು ಕಡಿಮೆಯಾಯಿತು. ಇಲ್ಲಿಂದ ಎಷ್ಟು ಕಾಗದ ಬರೆದರೂ ಉತ್ತರವೇ ಇಲ್ಲ ಪತ್ರ ಬರೆಯುವುದೇ ಹೀಗಾದಮೇಲೆ ಬರುವದಂತೂ ನಿಂತೇ ಹೋಯಿತು. ಪ್ರಭೆಯು ಹಗಲು ರಾತ್ರಿ ಚಿಂತೆಯಿಂದ ಕೊರಗಲಾ ರಂಭಿಸಿದಳು. ಕೊನೆಗೆ ಜ್ವರ, ಕೆಮ್ಮು ಉಂಟಾಗಿ ಕ್ಷಯದ ಚಿಹ್ನೆಗಳು ಕಾಣಿಸಲಾರಂಭಿಸಿದುವು.

ಕರ್ಮವೀರನು ವಿಜಯನನ್ನು ಕರತರಲು ಗೋರಖ್‌ಪುರಕ್ಕೆ ಬಂದನು. ಅಲ್ಲಿಯ ಬಣ್ಣವೇ ಬೇರೆಯಾಗಿತ್ತು. ಹಗಲು ರಾತ್ರಿ

ಕುಡಿತ! ನೋಡಿ ಬಹಳ ಸಂಕಟಪಟ್ಟು ಬುದ್ಧಿ ಹೇಳಿ, ತನ್ನ ಸಂಗಡ ಹೊರಡಲೇ ಬೇಕೆಂದು ಹೇಳಿದನು.

ಆದರೆ ವಿಜಯನು ಏನೇನೋ ಕಾರಣಗಳನ್ನು ಮುಂದಿಟ್ಟು, ಕಂದಾಯದ ಬಾಕಿ ಬಹಳ ಇರುವುದೆಂದೂ ಕೂಡಲೇ ಹೊರಟು ಬರಲು ಸಾಧ್ಯವಿಲ್ಲವೆಂದೂ ಹೇಳಿಬಿಟ್ಟನು. ಅವನು ಹೇಳಿದ್ದೆಲ್ಲ ನಿಜವೆಂದು ನಂಬಿ ಕರ್ಮವೀರನು ಹಿಂದಿರುಗಿದನು.

ಒಂದು ತಿಂಗಳಾದರೂ ವಿಜಯನು ಬರಲೇ ಇಲ್ಲ. ತನ್ನ ತಂದೆಯ ಆಶ್ವಾಸನೆಯಿಂದ ಹಸುರಾಗಿದ್ದ ಪ್ರಭೆಯ ಆಶಾಲತೆಯು ಪುನಃ ಒಣಗಲಾರಂಭಿಸಿತು.

ಅವಳ ರೋದನವನ್ನು ನೋಡಿ ಅವಳ ತಾಯಿಯು ಗೋರಖ್ ಪುರಕ್ಕೆ ಹೋಗಿ ವಿಜಯನನ್ನು ನೋಡಿಕೊಂಡು ಬರುವಂತೆ ಮಗಳಿಗೆ ಹೇಳಿದಳು.

ತಾರೆ – "ಅವರು ಈ ರೀತಿ ದೂರವಾಗಿರುವಾಗ, ನೀನೇಕೆ ಅವರನ್ನೇ ಧ್ಯಾನಿಸುತ್ತಿರುವೆ? ಪುರುಷನು ಒಂದುವೇಳೆ ತನ್ನ ಪತ್ನಿಯ ವಿಷಯವಾಗಿ ಈ ವರ್ತನೆಯನ್ನು ಕೇಳಿದನೆಂದರೆ, ಅವಳ ಮುಖವನ್ನು ಸಹ ನೋಡುತ್ತಿರಲಿಲ್ಲ. ಆದರೂ ನೀನು ಅವರನ್ನು ನೋಡ ಬೇಕೆಂದಿದ್ದೀಯೆ?"

ಪ್ರಭೆ—' ತಾರಕ್ಕಾ! ದೇವರೇ ನನ್ನ ಹೃದಯವನ್ನು ಆ ರೀತಿ ಮಾಡಿದ್ದಾನಲ್ಲ. ಅವರು ನನ್ನನ್ನು ಮರೆತರೂ ನಾನು ಅವರನ್ನು ಮರೆಯಲಾರೆ! ಕೊನೆತನಕ ಅವರನ್ನು ನೋಡಬೇಕೆಂಬ ಆಸೆಯೇ ನನಗಿದೆಯಲ್ಲ!"

ತಾರೆ—"ಹಾಗಾದರೆ ಹೋಗುವುದಿಲ್ಲವೇಕೆ?"

ಪ್ರಭೆ—"ಅಲ್ಲಿಗೆ ಹೋದರೆ ಅವಮಾನವಾಗುವುದರಿಂದ".

— ೬ —

ಪ್ರಭೆಯು ಸುಮ್ಮನೆ ಮಲಗಿದ್ದಾಳೆ. ಯಾರನ್ನೋ ಹುಡುಕುತ್ತಿರುವಂತೆ ಕಣ್ಣನ್ನು ಬಿಟ್ಟು ನೋಡುತ್ತಿದ್ದಾಳೆ.

ಶಾಂತಾದೇವಿಯು ನಿರ್ಮಲಾದೇವಿಯೊಡನೆ ಹೀಗೆಂದಳು –

"ಅಕ್ಕ, ನೋಡಿದೆಯಾ ನನ್ನ ಮಗಳ ಸ್ಥಿತಿಯನ್ನು! ಐದು ವರುಷಗಳಿಂದ ಒಂದೇ ಸಮನಾಗಿ ಅಳುತ್ತಿರುವಳು. ನನಗೇನೋ ಇವಳು ಬದುಕುವ ಆಸೆಯಿಲ್ಲ".

ನಿರ್ಮಲ—"ನಾನು ಗೋರಖ್‌ಪುರಕೆ ಹೋಗುತ್ತೇನೆ".

ಶಾಂತಾ—"ಅವರು ಬರುವ ಭರವಸೆ ಇಲ್ಲ".

ನಿರ್ಮಲ—"ನಾನು ಹೋದರೆ ಅವನನ್ನು ಕರೆದುಕೊಂಡೇ ಬರುವೆನು; ಇಲ್ಲವಾದರೆ ಅಲ್ಲೇ ಪ್ರಾಣವನ್ನು ಬಿಡುವೆನು. ಇಂತಹವನು ನನ್ನ ಹೊಟ್ಟೆಯಲ್ಲಿ ಯಾಕಾಗಿ ಹುಟ್ಟಿದ್ನೋ?"

ನಿರ್ಮಲಾದೇವಿಯು ಅಂದೇ ಗೋರಖ್‌ಪುರಕ್ಕೆ ಹೋದಳು. ಎರಡನೆ ಗಾಡಿಯಿಂದಲೇ ಹಿಂದಿರುಗುವುದಾಗಿ ಹೇಳಿ ಹೋಗಿದ್ದಳು. ಆದರೆ ಆರು ದಿನಗಳಾದರೂ ಬರಲಿಲ್ಲ. ಏಳನೆ ದಿನ ಸಂಜೆಗೆ ವಿಜಯನೊಡನೆ ಬಂದಳು. ಆಗ ಪ್ರಭೆಯು "ಅಮ್ಮಾ, ಅವರು ಬಂದರೇ? ಬೇಗ ತೋರಿಸು" ಎಂದಳು.

ವಿಜಯನು ತನ್ನ ಮುಖವನ್ನು ಪ್ರಭೆಗೆ ತೋರಿಸಲಾರದೆ ಹೋದನು. ಪ್ರಭೆಯು ಯಾರನ್ನೋ ಅಪ್ಪಿಕೊಳ್ಳುವಂತೆ ತನ್ನ ಕೈಗಳನ್ನು ನೀಡಿದಳು. ತಾಯಿಯೊಡನೆ "ಅಮ್ಮಾ, ಅವರ ಚರಣಗಳೆಲ್ಲಿ, ತೋರಿಸು. ಕೊನೆಯ ಸಾರಿ ಮುಟ್ಟಿ ಬಿಡುತ್ತೇನೆ. ಪುನಃ ಮುಟ್ಟಲಾರೆ" ಎಂದಳು.

ವಿಜಯನು ಹುಚ್ಚನಂತೆ ನುಡಿದನು—"ಪ್ರಭಾ, ನಿನ್ನ ಮರಣಕ್ಕೆ ನಾನೇ ಕಾರಣನು. ನಾನು ಪಾಪಿ. ಚಾಂಡಾಲ. ನನ್ನ ಕಾಲುಗಳು ನಿನ್ನ ಸ್ಪರ್ಶಕ್ಕೆ ಯೋಗ್ಯವಲ್ಲ. ನೀನು ಸ್ವರ್ಗದ ದೇವತೆ, ನಾನು ಪಾಪಿ! ಪಾಪಿ ಮತ್ತು ದೇವತೆಗೆ ಸ್ನೇಹ ಸಾಧ್ಯವಿಲ್ಲ! ನನ್ನನ್ನು ಕ್ಷಮಿಸು!"

ಪ್ರಭೆ—"ಸ್ವಾಮಿ, ನಾನು ದಾಸಿ. ನನ್ನ ಕ್ಷಮೆ ಬೇಡುವದು ಅನ್ಯಾಯ. ದಯಮಾಡಿ ನಿಮ್ಮ ಕಾಲುಗಳನ್ನು ನೀಡಿರಿ".

ವಿಜಯ—"ನಾನು ಕೊಲೆಪಾತಕಿ. ನೀನು ನನ್ನನ್ನು ಕ್ಷಮಿಸಿದರೇನೇ ನಾನು ನಿನ್ನ ಬಳಿಗೆ ಬರುವುದು".

ಪ್ರಭೆ—"ದೇವರಲ್ಲಿ ನಿಮಗಾಗಿ ಕ್ಷಮೆ ಬೇಡುತ್ತೇನೆ. ಮೊದಲೇ ನಾನು ನಿಮ್ಮನ್ನು ಮನ್ನಿಸಿದ್ದೇನೆ".

ಸ್ವಲ್ಪ ಹೊತ್ತು ಕಣ್ಣುಗಳನ್ನು ಮುಚ್ಚಿಕೊಂಡಿದ್ದು ಪ್ರಭೆಯು ಪುನಃ ಹೇಳಿದಳು: ''ಸ್ವಾಮಿ........ಇನ್ನು ತಡಮಾಡಬೇಡಿ. ನಿಮ್ಮ ದರ್ಶನಕ್ಕಾಗಿಯೇ ನಾನು ಇದುವರೆಗೆ ಇದ್ದುದು. ಇನ್ನು ತಡ ಮಾಡಬೇಡಿ."

---

## ೨ ಮಾಡಿದ್ದುಣ್ಣೋ ಮಹಾರಾಯ

ಜಗದೀಶ ಪುರದಲ್ಲಿ ಠಾಕುರ ಅಮರಸಿಂಹರೆಂಬವರಿದ್ದಾರೆ. ಬಹಳ ದಯಾಶಾಲಿಗಳು. ಇರುವ ಸ್ವಲ್ಪ ಜಮೀನಿನ ಉತ್ಪತ್ತಿಯಲ್ಲಿಯೇ ಕುಟುಂಬದ ಪೋಷಣೆಯನ್ನು ಮಾಡುತ್ತಾರೆ. ಪ್ರಜೆಗಳ ಕಷ್ಟ ಸುಖಗಳನ್ನು ಕೇಳಲು ಸದಾ ಸಿದ್ಧರೇ ಆಗಿದ್ದಾರೆ. ಅವರ ಪತ್ನಿಯು ಮರಣಹೊಂದಿ ಇಂದಿಗೆ ೧೦ ವರ್ಷಗಳಾಗಿವೆ. ಕಾಂತಿ ಎಂಬ ಒಬ್ಬ ವಿಧವೆಯಾದ ಮಗಳು ಮತ್ತು ಲಿಂಗಿ ಎಂಬ ಒಬ್ಬ ದಾಸಿ ಇವರೇ ಅವರ ಮನೆಯಲ್ಲಿದ್ದಾರೆ. ಅವರ ಮನೆಯ ಬಳಿ ಠಾಕುರು ಧರ್ಮ ಸಿಂಹರ ಮನೆಯೂ ಸಹ ಇದೆ. ಆ ಮನೆಗೆ ಕಾಂತಿಯು ಯಾವಾಗಲೂ ಹೋಗುತ್ತ ಬರುತ್ತ ಇರುವಳು. ಅವರ ಮನೆಯಲ್ಲಿರುವ ಸುಭದ್ರೆ ಎಂಬ ಒಬ್ಬ ಹುಡುಗಿಯು ಕಾಂತಿಯ ಸಖಿಯು. ಕಾಂತಿಯು ವಿಧವೆಯಾದಾಗಿನಿಂದ ಅಮರಸಿಂಹರು ದುಃಖಿಗಳಾಗಿದ್ದಾರೆ. ಧರ್ಮಸಿಂಹರು ಅವರನ್ನು ಪುನಃ ವಿವಾಹವಾಗುವಂತೆ ಪ್ರೇರಿಸುತ್ತಿರುತ್ತಾರೆ. ಅದಕ್ಕೆ ಅಮರಸಿಂಹರು ಈ ರೀತಿ ಉತ್ತರ ಕೊಡುತ್ತಾರೆ—"ಅಯ್ಯೋ, ಇದೇನು ನೀವು ಹುಚ್ಚರಂತೆ ಮಾತನಾಡುವಿರಲ್ಲ! ಬಾಲ ವಿಧವೆಯಾದ ಮಗಳನ್ನು ಮನೆಯಲ್ಲಿಟ್ಟುಕೊಂಡು ಪುನರ್ವಿವಾಹ ಮಾಡಿಕೊಳ್ಳುವುದೇ? ಅವನದು ಕಲ್ಲಿನ ಹೃದಯವಾಗಿರಬೇಕು. ನಾನು ಅಂತಹ ನೀಚ ಕೆಲಸವನ್ನು ಎಂದಿಗೂ ಮಾಡಲಾರೆ"

೦೦ ೦೦ ೦೦

ಆ ಊರಿಗೆ ಸೇರಿದಂತೆಯೇ ಬೇರೆ ಒಂದು ಗ್ರಾಮವಿದೆ. ಅಲ್ಲಿ ಠಾಕುರ್ ಕಮಲಾಪತಿ ಎಂಬುವರು ಇದ್ದಾರೆ. ಅವರಿಗೆ ೧೮-೧೯ ವರ್ಷ ವಯಸ್ಸಿನ ಮೋಹನಸಿಂಹನೆಂಬ ಒಬ್ಬ ದುರಾಚಾರಿ ಮಗನಿದ್ದಾನೆ. ಅವನೆದುರಿನಲ್ಲಿ ಊರಿನ ಸ್ತ್ರೀಯರು ಹೊರಗೆ ಹೊರಡುವುದೇ ಕಷ್ಟ ವಾಗಿದೆ.

ಒಂದು ದಿನ ಕಾಂತಿ ಮತ್ತು ಸುಭದ್ರೆ ಇಬ್ಬರೂ ಈಶ್ವರನ ಪೂಜೆ ಗೆಂದು ಮಂದಿರಕ್ಕೆ ಹೋಗುತ್ತಿದ್ದರು. ಅವರ ಮೇಲೆ ಮೋಹನ ಸಿಂಹನ ದೃಷ್ಟಿಯು ಬಿದ್ದಿತು. ಅವನು ಕಾಂತಿಯನ್ನು ಮೋಹಿಸಿ, ಆಕೆಯನ್ನು ತನ್ನ ವಶಪಡಿಸಿಕೊಳ್ಳಬೇಕೆಂದು ನಿಶ್ಚಯಿಸಿದನು. ಅವರ ಮನೆಯ ಸುತ್ತ ಹದ್ದಿನಂತೆ ಸಂಚರಿಸತೊಡಗಿದನು ಆದರೆ ಅವನು ತನ್ನ ಕೆಲಸದಲ್ಲಿ ಯಶಸ್ವಿಯಾಗದಿರಲು ಅಮರ ಸಿಂಹನ ಬಳಿ ಕೆಲಸಕ್ಕೆ ಸೇರಿ ಬಿಟ್ಟನು ಲಿಂಗಿಯು ಅಮರಸಿಂಹನೊಡನೆ "ಊರಲ್ಲೆಲ್ಲಾ ದುಷ್ಟನೆಂದು ಹೆಸರಾಗಿರುವ ಅವನನ್ನು ಏಕೆ ಕೆಲಸಕ್ಕೆ ನಿಯಮಿಸಿ ಕೊಂಡಿರಿ?" ಎಂದು ಕೇಳಿದಳು.

ಅಮರ—"ಅವನು ನನ್ನೆದುರಿನಲ್ಲಿ ಪ್ರಮಾಣಮಾಡಿ ಹೇಳಿದ್ದಾನೆ. ಎಷ್ಟೇ ಕೆಟ್ಟವನಾಗಲಿ, ದೊಡ್ಡ ಮನುಷ್ಯನ ಮಗ ಅಲ್ಲದೆ ಅವನು ಮನೆಹೊರಗಡೆ ತಾನೇ ಇರೋದು"?

ಲಿಂಗಿ – "ಅಲ್ಲ ಸ್ವಾಮಿ, ದುಷ್ಟ ಮನುಷ್ಯರು ಏನೇ ಪ್ರಮಾಣ ಮಾಡಿದರೂ, ಅವರನ್ನು ನಂಬಬಾರದು."

ಅಮರ—"ನಾನು ಅವನನ್ನು ಮನೆಯೊಳಗೆ ಬರದಂತೆ ನೋಡಿ ಕೊಳ್ಳುವೆನು".

ಲಿಂಗಿ – "ಹೇಳೋದು ನನ್ನ ಕೆಲಸ, ಹೇಳಿದೆ. ಎನ್ಬೇಕಾದ್ರೂ ಮಾಡಿಕೊಳ್ಳಿ."

ಅಮರ—"೩—೪ ತಿಂಗಳ ನಂತರ ಅವನನ್ನು ಕೆಲಸದಿಂದ ತೆಗೆದುಬಿಡುವೆನು".

ಲಿಂಗಿಯು ಸುಮ್ಮನಾದಳು.

೦೦ ೦೦ ೦೦

ಈಗ ಮೋಹನಸಿಂಹನದೇ ಆಡಳಿತ. ಮೊದಮೊದಲು ಹೊರಗೇ ಇರುತಿದ್ದರೂ, ಕ್ರಮೇಣ ಒಳಗೆ ಬರಲಾರಂಭಿಸಿದನು. ಅಮರಸಿಂಹನೂ ಅವನನ್ನು ನಂಬಲಾರಂಭಿಸಿದನು.

ಲಿಂಗಿಯು ಯಾವಾಗಲೂ ಕಾಂತಿಯ ಬಳಿಯಲ್ಲಿಯೇ ಇರುತ್ತಿದ್ದುದರಿಂದ, ಮೋಹನಸಿಂಹನಿಗೆ ಅವಕಾಶವೇ ದೊರೆಯಲಿಲ್ಲ. ಕೊನೆಗೆ ಅವನು ಪ್ರಣಯ ಪತ್ರಗಳನ್ನು ಬರೆಯಲಾರಂಭಿಸಿದನು. ಕಾಂತಿಗೆ ಬಹಳ ಸಿಟ್ಟು ಬಂದಿತಾದರೂ, ಲಜ್ಜೆಯಿಂದ ಯಾರೊಡನೆಯೂ ಹೇಳುತ್ತಿರಲಿಲ್ಲ.

ಆದರೆ ಈ ದಿನ ಕಾಂತಿಗೆ ಬರೆದ ಪತ್ರದಲ್ಲಿ, 'ಇಂದು ನನ್ನ ಮಾತಿನಂತೆ ನಡೆಯದಿದ್ದರೆ, ಕಳ್ಳತನದಿಂದ ಎತ್ತಿಕೊಂಡು ಹೋಗಿಬಿಡುವೆನು. ಎಂದಿತ್ತು. ಕಾಂತಿಯು ಹೆದರಿದಳು. ಆ ಸಮಯಕ್ಕೆ ಸರಿಯಾಗಿ ಸುಭದ್ರೆಯು ಬಂದು ಕಾಂತಿಯ ವ್ಯಸನಕ್ಕೆ ಕಾರಣವನ್ನು ಕೇಳಿದಳು.

ಕಾಂತಿ—"ಏನೂ ಇಲ್ಲ, ನನ್ನ ಕೋಣೆಗೆ ಬಂದರೆ ಎಲ್ಲವನ್ನೂ ಹೇಳುತ್ತೇನೆ"-

ಕಾಂತಿಯು ಪತ್ರಗಳ ಕಟ್ಟನ್ನು ಸುಭದ್ರೆಯ ಮುಂದೆ ಇಟ್ಟುಬಿಟ್ಟಳು. ಸುಭದ್ರೆಯು ಘಾಬರಿಗೊಂಡು, ಸ್ವಲ್ಪ ಹೊತ್ತು ಯೋಚಿಸಿ "ಏನೂ ತೋರೋದೇ ಇಲ್ಲವಲ್ಲ; ನಿಮ್ಮ ತಂದೆಗೆ ತಿಳಿಸಲೆ?" ಎಂದಳು-

ಕಾಂತಿ—"ಬೇಡ, ಅಕ್ಕ, ನಾವೇ ಆ ಖೂಳನಿಗೆ ಸರಿಯಾದ ಬುದ್ಧಿಯನ್ನು ಕಲಿಸಬೇಕು. ನೀನು ನನಗೆ ಸಹಾಯ ಮಾಡಿದರೆ, ಆ ದುಷ್ಟನು ಎಂದೆಂದಿಗೂ ಮರೆಯಲಾರದಂತಹ ಶಿಕ್ಷೆಯನ್ನು ವಿಧಿಸುವೆನು."

ಸುಭದ್ರೆ—"ಏನ್ಮಾಡುವೆ?"

ಕಾಂತಿ—"ಏನ್ಮಾಡುವೆನೇ- ಇಂತಹ ಸಂದರ್ಭದಲ್ಲಿ ಸ್ತ್ರೀಯರು ಏನು ಮಾಡುವರೋ ಅದನ್ನೇ ನಾನೂ ಮಾಡುವೆನು. ಇವತ್ತು ಸಂಜೆ ಇಲ್ಲಿಗೆ ಬಾ. ತಾಯಿಯೊಡನೆ ಹೇಳೀಯೆ ಜೋಕೆ!"

ಸುಭದ್ರೆ—"ಯಾಕೆ, ಏನಾದರೂ ನಾಚಿಕೆಯೇ?"

ಕಾಂತಿ—"ನಾಳೆ ನಡೆಯುವುದನ್ನು ಈ ದಿನವೇ ಏಕೆ ಹೇಳೋದು? ಇರಲಿ, ಸಂಜೆಗೆ ಖಂಡಿತ ಬರಬೇಕು, ತಿಳಿಯಿತೇ"

ಕಾಂತಿಯು ಅಡಿಗೆ ಕೆಲಸಗಳನ್ನು ಮುಗಿಸಿ, ಬಿಳಿ ಸೀರೆಯನ್ನುಟ್ಟು ತನ್ನ ಕೋಣೆಯಲ್ಲಿ ಕುಳಿತು ತನ್ನ ಪತಿಯನ್ನು ಧ್ಯಾನಿಸತೊಡಗಿದಳು ಆಕೆಯ ಪತಿಯು ಅವಳಿಗೆ ಸಹಾಯ ಮಾಡುವುದಾಗಿ ಹೇಳುತಿದ್ದಂತೆ ತೋರಿತು. ಒಂಭತ್ತು ಗಂಟೆಯಾಯಿತು- ಮೋಹನಸಿಂಹನ ದುರ್ಗತಿಯನ್ನು ಯೋಚಿಸಿ, ಅವಳು ನಗಲಾರಂಭಿಸಿದಳು. ಅಷ್ಟರಲ್ಲಿ ಸುಭದ್ರೆಯು ಬಂದಳು.

ವರ್ಷ ಋತುವಿನ ರಾತ್ರಿ, ಗುಡುಗು ಮಿಂಚುಗಳ ಅರ್ಭಟ; ಭಾರತದ ದುಃಖವನ್ನು ನೋಡಿ, ಮೇಘರಾಜನು ಕಣ್ಣೀರನ್ನು ಸುರಿಸುವನೋ ಎಂಬಂತೆ ತೋರುತ್ತಿತ್ತು.

ಸುಭದ್ರೆ—"ಈ ದಿನ ನನಗೇಕೋ ಭಯವಾಗುತ್ತಿದೆ."

ಕಾಂತಿ—"ಹೆದರ ಬೇಡ, ಆ ದುರುಳನು ಬರುವ ಸಮಯವಾಯಿತು."

ಇಬ್ಬರೂ ಕೋಣೆಗೆ ಹೋದರು.

ಕಾಂತಿ—"ಸುಭದ್ರಾ, ನೋಡಿಲ್ಲಿ ನನಗೆ ಸೋಲಾದರೆ ಈ ಕಠಾರಿಯಿಂದ ನನ್ನ ಮಾನವನ್ನು ಕಾಪಾಡುವುದು ನಿನಗೇ ಸೇರಿದೆ. ಇದನ್ನು ನನ್ನ ಪತಿದೇವರು ಅವಸಾನ ಕಾಲದಲ್ಲಿ ನನಗೆ ಕೊಟ್ಟಿದ್ದರು."

ಸುಭದ್ರೆ—"ಇದನ್ನು ನಿನ್ನ ಬಳಿ ಏಕೆ ಇಟ್ಟುಕೊಳ್ಳುವುದಿಲ್ಲ?"

ಕಾಂತಿ—"ಇಷ್ಟು ದೊಡ್ಡ ಆಯುಧವನ್ನಿಟ್ಟುಕೊಂಡಿದ್ದರೆ ಅವನಿಗೆ ತಿಳಿದುಹೋಗುತ್ತದೆ. ನನ್ನ ಬಳಿ ಒಂದು ಹರಿತವಾದ ಚಾಕು ಇದೆ. ಸಾಕು ಸುಮ್ಮನಿರು ದೇವರು ನನ್ನ ಮಾನವನ್ನು ಕಾಪಾಡಲೆಂದೇ ನನ್ನ ಪ್ರಾರ್ಥನೆ:"

ಆ ಕಾಲಕ್ಕೆ ಸರಿಯಾಗಿ ಸಿಳ್ಳುಹಾಕಿದ ಶಬ್ದವಾಯಿತು.

ಕಾಂತಿ—"ಸುಭದ್ರೆ, ನೀನು ಒಳಗಿನ ಕೋಣೆಯಲ್ಲಿರು; ನಾನು ಬಾಗಿಲನ್ನು ತೆರೆಯುತ್ತೇನೆ."

ಕಾಂತಿಯು ಬಾಗಿಲನ್ನು ತೆರೆದಳು ಮೋಹನಸಿಂಹನು ಒಳಗೆ ಬಂದ ಕೂಡಲೆ ಕಾಂತಿಯು ಕೃತಕ ಪ್ರೇಮವನ್ನು ತೋರಿಸುತ್ತ— "ನಾನಂತೂ ನಿಮ್ಮ ದಾರಿಯನ್ನೇ ಕಾಯುತ್ತಿದ್ದೆನು. ಬಹಳ ತಡ

ಮಾಡಿಬಿಟ್ಟಿರಿ. ನನಗೆ ಒಂದೊಂದು ಕ್ಷಣವೂ ಒಂದೊಂದು ಯುಗವಾಗಿತ್ತು" ಎಂದಳು.

ಮೋಹನ–"ಸ್ವಲ್ಪ ತಡವಾಯಿತು, ಪ್ರಿಯೆ, ಬಾ ಹತ್ತಿರ, ಕುಳಿತುಕೊ. ಆಹಾ, ಎಂತಹ ಸುದಿನ ಇವತ್ತು!"

ಕಾಂತಿ—''ಗಂಡಸರ ಹತ್ತಿರ ಕುಳಿತುಕೊಳ್ಳುವುದಕ್ಕೆ ಹೆದರಿಕೆ ಆಗ್ತದಪ್ಪ. ಮೊದಲು ಒಳ್ಳೇ ಮೃದುವಾಗಿ ಮಾತನಾಡ್ತೀರಿ, ನಂತರ ಕೈಬಿಟ್ಟು ಬಿಡ್ತೀರಿ."

ಮೋಹನಸಿಂಹ–(ಉನ್ಮತ್ತನಾಗಿ) "ಇಲ್ಲ ಪ್ರಿಯೆ, ನಾನು ಅಂತಹ ಮೋಸಗಾರನಲ್ಲ. ನೀನು ಹೇಳಿದಂತೆ ಕೇಳುತ್ತೇನೆ. ನಿನಗಾಗಿ ಪ್ರಾಣವನ್ನು ಬೇಕಾದರೂ ಅರ್ಪಿಸಬಲ್ಲೆ!''

"ರಾತ್ರಿ ಎಲ್ಲಾ ಇಲ್ಲೇ ಇರಬೇಕಾಗುತ್ತೆ"

ಮೋಹನಸಿಂಹನು ಆನಂದಪರವಶನಾಗಿ, ಮಂಚದ ಮೇಲೆ ಮಲಗಿಕೊಂಡು, ಎದುರಿನಲ್ಲಿದ್ದ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡನು ಇದ್ದಕ್ಕಿದ್ದಂತೆ ಕಾಂತಿಯು ಅವನ ಎದೆಯ ಮೇಲೆ ನೆಗೆದು ಕುಳಿತು ಕಠೋರ ಧ್ವನಿಯಲ್ಲಿ ನುಡಿದಳು—

"ಸ್ವಲ್ಪ ಅಲ್ಲಾಡಿದರೂ ಸರಿ, ಚಾಕುವಿನಿಂದ ನಿನ್ನ ಎದೆಯನ್ನು ಸೀಳಿಬಿಟ್ಟೇನು. ಸುಮ್ಮನೆ ಬಿದ್ದುಕೊಂಡಿರು"

ಮೋಹನಸಿಂಹನು ಕ್ರೋಧೋನ್ಮತ್ತನಾಗಿ ಕಾಂತಿಯನ್ನು ನೋಡಿದನು. ಕಾಂತಿಯು ಚಾಕುವನ್ನು ತೆಗೆದುಕೊಂಡು ಅವನ ಮೂಗನ್ನು ಕತ್ತರಿಸಿಬಿಟ್ಟಳು ಸುಭದ್ರೆಯೂ ಬಂದಳು, ಇಬ್ಬರೂ ಚಪ್ಪಾಳೆ ತಟ್ಟುತ್ತ ನಗಲಾರಂಭಿಸಿದರು. ಗಲಿಬಿಲಿಯನ್ನು ಕೇಳಿ ಅಮರಸಿಂಹ ಮತ್ತು ಅವನ ಸೇವಕರೂ ಒಳಗೆ ಬಂದರು. ಸುಭದ್ರೆಯು ಅವನನ್ನು ಕೊಲ್ಲುವಂತೆ ಅಮರಸಿಂಹನಿಗೆ ಹೇಳಿದಳು. ಆದರೆ ಕಾಂತಿಯು ಅದನ್ನು ತಡೆದು, ಆ ಪಾಪಿಗೆ ಆಗಲೇ ಪ್ರಾಯಶ್ಚಿತ್ತವಾಗಿದೆಯೆಂದು ಹೇಳಿದಳು.

ಸುಭದ್ರೆ—"ಅವನ ಒಂದು ಕೈಯನ್ನಂತೂ ಖಂಡಿತ ಕೊಯ್ದು ಹಾಕಲೇ ಬೇಕು''

ಕಾಂತಿ—'ನಾಚಿಕೆಯಿದ್ದರೆ ಪುನಃ ಮುಖ ತೋರಿಸಲಾರ."

ಸುಭದ್ರೆ—"ನಾನು ಒಂದು ಕೈಯನ್ನು ಕತ್ತರಿಸದೆ ಎಂದಿಗೂ ಬಿಡುವವಳಲ್ಲ."

ಕಾಂತಿ—"ಇಲ್ಲ ಅಕ್ಕ, ಬೇಡ, ಬಿಡು; ಸಾಯುವತನಕ ಗುರುತಾಗಿದೆ. ಅಪ್ಪ! ಇವನನ್ನು ಹೊರಕ್ಕೆ ತಳ್ಳಿಬಿಡಿ."

ಠಾಕುರ ಸಾಹೇಬರು ಅವನಿಗೆ ಬಲವಾದ ನಾಲ್ಕು ಒದೆಗಳನ್ನು ಕೊಟ್ಟು ಹೊರಕ್ಕೆ ತಳ್ಳಿದರು ನಂತರ ಇಬ್ಬರು ಹುಡುಗಿಯರನ್ನೂ ಆಲಂಗಿಸಿ ಆಶೀರ್ವಾದ ಮಾಡುತ್ತಾ ಹೇಳಿದರು:

"ನನ್ನ ಪ್ರಿಯ ಕುವರಿರಾ! ನೀವು ಆರ್ಯದೇವಿಯರ ಮುಖವನ್ನು ಉಜ್ವಲಗೊಳಿಸಿಬಿಟ್ಟಿರುವಿರಿ. ಪರಮಾತ್ಮನು ನಿಮ್ಮ ಮರ್ಯಾದೆಯನ್ನು ಯಾವಾಗಲೂ ರಕ್ಷಿಸಲಿ! ಇದೇ ನನ್ನ ಆಶೀರ್ವಾದ"

---

## ೩ ಸಾಹಸ

ಈಗಿನ ಕಾಲದಲ್ಲಿ ಗೃಹಕೃತ್ಯವನ್ನು ನಡೆಸುವುದು ಸುಲಭವಾದ ಕೆಲಸವಲ್ಲ ಅದರಲ್ಲೂ ಪರಿವಾರವು ದೊಡ್ಡದಾಗಿದ್ದರಂತೂ ಹೇಳುವಂತಿಲ್ಲ ಪಂಡಿತ ದೀನಾನಾಥರ ತಲೆಮೇಲೆ ಒಂಭತ್ತು ಪ್ರಾಣಿಗಳ ಹೊರೆ ಇದ್ದಿತು. ತಾವು, ತಮ್ಮ ಪತ್ನಿ–ಜಾನಕಿ, ಮೂರು ಗಂಡು, ನಾಲ್ಕು ಹೆಣ್ಣು ಮಕ್ಕಳು! ಹಗಲೆಲ್ಲ ಶಾಲೆಯಲ್ಲಿ ಕೆಲಸ ಮಾಡಿ, ಉಳಿದ ಕಾಲದಲ್ಲಿ ಇತರರಿಗೂ ಪಾಠ ಹೇಳಿ, ತಿಂಗಳಿಗೆ ೫೦ ರೂಪಾಯಿ ಸಂಪಾದಿಸುತ್ತಿದ್ದರು. ಆದರೆ ಅದು ಸಾಕಾಗುವುದೆ?

ಹಿಂದೂ ಪರಿವಾರದಲ್ಲಿ ಎಲ್ಲಕ್ಕಿಂತ ಹೆಚ್ಚಿನ ತೊಂದರೆ ಎಂದರೆ ಹೆಣ್ಣು ಮಕ್ಕಳದೇ. ಹಿರಿಯ ಮಗಳಾದ ಶ್ಯಾಮಲೆಯ ವಿವಾಹವನ್ನು ಹೇಗೋ ಮಾಡಿಬಿಟ್ಟಿದ್ದರು. ಅವಳ ಸೋದರ ಮಾವನಿಗೆ ಮಕ್ಕಳಿರಲಿಲ್ಲವಾದುದರಿಂದ ಅವನೇ ಅವಳನ್ನು ಸಾಕಿ, ಒಳ್ಳೆಯ ವರನಿಗೆ ಕೊಟ್ಟು ಮದುವೆ ಮಾಡಿದ್ದನು. ಒಂದೇನೋ ಆಯಿತು, ಆದರೆ ಈಗ ರಮಾ ಎಂಬ ಎರಡನೆ ಹುಡುಗಿಯು ಪ್ರಾಪ್ತವಯಸ್ಕಳಾಗಿದ್ದಳು. ಅವಳ ಮದುವೆಯನ್ನು ಹೇಗೆ ಮಾಡುವುದು? ವರದಕ್ಷಿಣೆ ಎಲ್ಲಿಂದ ತರಲಿ?

ಎಂಬುದೇ ಅವರಿಗಿದ್ದ ಚಿಂತೆ. ಆದರೆ ಸಮಾಜದವರು ಮಾತ್ರ ಮನ ಬಂದಂತೆ ಮಾತನಾಡಿಕೊಳ್ಳಲಾರಂಭಿಸಿದರು. ಹುಡುಗಿಯಲ್ಲಿ ಏನೋ ಲೋಪವಿರಬಹುದೆಂದೇ ಎಲ್ಲರ ಸಂಶಯ.

ಒಂದು ದಿನ ದೀನಾನಾಥರು ತಮ್ಮ ಪತ್ನಿಯೊಡನೆ "ಏನು ಮಾಡಲಿ? ಎಲ್ಲಿಯೂ ಸರಿಯಾದ ವರನೇ ದೊರೆಯುದಿಲ್ಲವಲ್ಲ. ಪಂಡಿತ ಗಂಗಾಧರರ ಮಗ ಬುದ್ಧಿವಂತ; ಬಿ. ಏ ಓದುತ್ತಿದ್ದಾನೆ. ಆದರೆ ಐದು ಸಾವಿರ ಕೇಳ್ತಾರಲ್ಲ! ಎಲ್ಲಿಂದ ತರ್ಲಿ ಎಂದು ಹೇಳಿದರು."

ಜಾನಕಿ—"ಏನಾದ್ರೂ ಮಾಡ್ಲೇ ಬೇಕೂಂದ್ರೆ; ಜನರಾಡುವುದನ್ನು ಕೇಳಲಾರೆ."

ದೀನಾನಾಥ—"ಜನರ ಮಾತಿಗೆ ಕಟ್ಟೆಲ್ಲಿ? ಅಂದರೆ ಅಂದುಕೊಳ್ಳಿ, ಬಿಡು ಹುಡುಗ ಸರಿಯಾಗಿಲ್ಲ ಅಂತ ನೀನೇ ಹೇಳ್ತಿಯಲ್ಲಾ, ಸರಿಯಾದವನು ಬೇಡವೇ?"

ಜಾನಕಿ—"ನಾನೇನೂ ಹೇಳೋದಿಲ್ಲ. ಯಾರೋ ಒಬ್ಬ!"

ದೀನಾನಾಥ—"ಹಾಗೋ, ಹಾಗಾದರೆ ಒಬ್ಬ ಇದ್ದಾನೆ. ೪೦ ವರ್ಷ ವಯಸ್ಸು, ೩ನೇ ಮದುವೆ, ೪ ಮಕ್ಕಳೂ ಇದ್ದಾರೆ. ಮನೆಯಲ್ಲಿ ಹೊಟ್ಟೆಬಟ್ಟೆಗೇನೂ ಕೊರತೆ ಇಲ್ಲ."

ಜಾನಕಿ—"ವಯಸ್ಸು ಹೆಚ್ಚಾಗಿದೆ!"

ದೀನಾನಾಥ—"ಒಬ್ಬನಲ್ಲೇ ಎಲ್ಲ ಸುಗುಣಗಳೂ ಹೇಗೆ ಇರಲು ಸಾಧ್ಯ? ಸತ್ಕುಲದವನಾಗಿರಬೇಕು, ಸಾಹುಕಾರನಾಗಿರಬೇಕು, ಕಡಿಮೆ ವಯಸ್ಸಿನವನಾಗಿರಬೇಕು. ಎಲ್ಲಿ ದೊರೆಯುತ್ತಾನೆ ಅಂತಹ ವರ? ಏನೇ ಆಗಲಿ, ಅವನನ್ನೇ ಗೊತ್ತುಮಾಡಲೆ?

ಜಾನಕಿ—"ನನಗೊಂದೂ ತಿಳೀದು. ಏನ್ಬೇಕಾದ್ರೂ ಮಾಡಿ"

ಪಂಡಿತರು ಅಲ್ಲಿಂದ ಹೊರಟರು.

—೨—

ಪಂಡಿತರು ಹೊರಗೆ ಹೋದ ಕೆಲವೇ ನಿಮಿಷಗಳಲ್ಲಿ ಪಾರ್ವತಿಯು ಒಳಕ್ಕೆ ಬಂದು "ರಮಾ, ಮಿಠಾಯಿ ತಿನ್ನಿಸೋದಾದ್ರೆ ಒಂದು ತಮಾಷೆ ತೋರಿಸ್ತೀನಿ" ಎಂದಳು.

ರಮಾ—"ಮಿಠಾಯಿ ಮೇಲೆ ಆಸೆ ಇದೆ ಎಂತ ಹೇಳು! ಈಗ ತಾನೇ ಶಾಲೆಯಿಂದ ಬಂದೆಯಾ?"

ಪಾರ್ವತಿ—"ಹೌದು, ಮನೆಗೆ ಸಹಾ ಹೋಗದೆ ಇಲ್ಲಿಗೇ ಬಂದೆ, ನಿನಗೆ ಇದನ್ನು ತೋರಿಸುವ ಉತ್ಸುಕತೆಯಿಂದ-"

ರಮಾ—"ನನಗೆ ಮೋಸಮಾಡ್ತಿದ್ದೀಯೆ?"

ಪಾರ್ವತಿ—"ನೋಡು, ಎಂತಹ ಚೆನ್ನಾಗಿದೇ ಅಂತೀಯೆ?"

ರಮೆಯು ಪಾರ್ವತಿಯ ಜೇಬಿಗೆ ಕೈಹಾಕಿ, ಅಲ್ಲಿದ್ದ ಒಂದು ಕಾರ್ಡನ್ನು ತೆಗೆದುಕೊಳ್ಳಲು ಮುಂದೆ ಬಂದಳು. ತನ್ನ ವಿವಾಹದ ಸಂಬಂಧವಾಗಿ ಎಲ್ಲಿಂದಲೋ ಬಂದಿರಬಹುದೆಂದು ಭಾವಿಸಿದಳು. ಆದರೆ ಪಾರ್ವತಿಯು ಅದನ್ನು ಕೊಡಲಿಲ್ಲ. ಆದರೆ ಸ್ವಲ್ಪ ಹೊತ್ತಿನ ನಂತರ ತೆಗೆದು ತೋರಿಸಿ "ರಮಾ, ನೋಡು ನೀನು ಪಾಸಾಗಿದ್ದೀಯೆ" ಎಂದಳು. ರಮೆಯು ಅದನ್ನು ನೋಡಿ, ಸಂತೋಷಪಟ್ಟಳು.

— ೩ —

ಇದಾದ ಮೂರು ಗಂಟೆ ನಂತರ ಪಂಡಿತರು ಮನೆಗೆ ಬಂದರು ರಮೆಯು ಪಾಸಾದ ಸುದ್ದಿಯನ್ನು ಕೇಳಿದರೂ, ಉದಾಸೀನದಿಂದ- 'ಒಳ್ಳೇದು'-ಎಂದು ಸುಮ್ಮನಾದರು. ಇಂತಹ ವಿದ್ಯಾವಂತಳೂ, ಕುಶ ಲಳೂ ಆದವಳನ್ನು ಮುದುಕನಿಗೆ ಕೊಡಬೇಕಲ್ಲ ಎಂದು ಅವರು ಚಿಂತಿಸುತ್ತಿದ್ದರು. ಅವರ ಪತ್ನಿಯೂ ಒಳಗಿಂದ ಬಂದು "ಕೇಳಿದಿರಾ, ರಮೆಯು ಪಾಸಾದ ಸುದ್ದಿಯನ್ನು! ನೀವು ಹೋದ ಕೆಲಸವೇನಾ ಯಿತು?" ಎಂದು ಕೇಳಿದಳು.

ಪಂಡಿತರು—"ಎಲ್ಲ ನಿಶ್ಚಯಮಾಡಿ ಬಂದಿದ್ದೇನೆ. ನೋಡೋ ಕೇನೋ ಹುಡುಗನಿಗೆ ೩೦-೩೫ ವರ್ಷವಾಗಿದೆ ಎಂದು ತೋರುತ್ತದೆ. ಆದರೆ ಜಾತಕವನ್ನು ನೋಡಿದರೆ ೫೦ ವರ್ಷವಾಗಿದೆ. ದೇವರು ಬೇಕಾದಷ್ಟು ಕೊಟ್ಟಿದ್ದಾನೆ. ಸುಖದಲ್ಲಿ ಬೆಳೆದ ದೇಹ."

ಜಾನಕಿ—"ಬಹಳ ವಯಸ್ಸಾಗಿ ಹೋಗಿದೆ. ನನ್ನ ಮಗಳ ಹಣೆಯಲ್ಲಿ ಇದೇ ಬರೆದಿತ್ತೇ?"

ಪಂಡಿತರು - "ಎಲ್ಲ, ಅವನಿಚ್ಛೆ! ಎಷ್ಟಾದರೂ ಹಿಂದಿನ ಕಾಲದವರು ಈಗಿನ ಯುವಕರಿಗಿಂತ ಎಷ್ಟೋ ಗಟ್ಟಿ. ನಮ್ಮ ಯುವಕರ ಮರಣ ಸಂಖ್ಯೆಯನ್ನು ನೋಡಿದರೆ ಭಯವಾಗುತ್ತಿದೆ. ಇಗೋ ೫೦೦ ರೂಪಾಯಿ ನೋಟು. ಅವರ ಕಡೆಯವರು ಸುಮಾರು ೧೫೦ ಮಂದಿ ಬರುವರಂತೆ. ಅಮರನಾಥರು ಕೊಟ್ಟರು ತೆಗೆದುಕೊಳ್ಳೀ ಎಂದು."

ಅಡಿಗೆ ಮನೆಯಲ್ಲಿದ್ದ ರಮೆಯು ಎಲ್ಲವನ್ನೂ ಕೇಳುತ್ತಿದ್ದಳು. ಪಾರ್ವತಿಯು ವೃದ್ಧನನ್ನು ಮದುವೆಯಾಗಿ ಕೆಲವೇ ದಿನಗಳಲ್ಲಿ ವಿಧವೆಯಾದುದು—ಎಲ್ಲವನ್ನೂ ಯೋಚಿಸಿ ಬಹಳ ಭಯಭೀತಳಾದಳು. ಕೂಡಲೆ ಪಾರ್ವತಿಯ ಮನೆಗೆ ಹೋದಳು. ಹೋದವಳೇ ಎಲ್ಲವನ್ನೂ ಹೇಳಿ ಗಟ್ಟಿಯಾಗಿ ರೋದಿಸಹತ್ತಿದಳು. "ಅಕ್ಕಾ, ನನ್ನ ಹಣೆ ಬರಹವನ್ನು ಕೇಳಿದೆ. ನನಗೆ ನೀನೇ ಗತಿ."

ಇಬ್ಬರೂ ಸೇರಿ ಒಂದು ಅರ್ಜಿಯನ್ನು ಬರೆದರು. ಹೆಣ್ಣುಮಕ್ಕಳ ಶಾಲೆಗೆ ಒಬ್ಬ ಅಧ್ಯಾಪಕಿಯ ಆವಶ್ಯಕತೆ ಇತ್ತು. ಪಾರ್ವತಿಯು ಅರ್ಜಿಯನ್ನು ಅಧಿಕಾರಿಗೆ ಮುಟ್ಟಿಸಿದಳು.

೪

ಮದುವೆಯ ಸಿದ್ಧತೆಗಳು ನಡೆದಿವೆ. ರಮೆಯು ಅಳುತ್ತಾ ಇದ್ದಾಳೆ. ತನ್ನ ಅರ್ಜಿಯು ಅಸ್ವೀಕೃತವಾದಲ್ಲಿ ವಿಷಪಾನ ಮಾಡುವುದೊಂದೇ ಉಳಿದಿರುವ ಮಾರ್ಗ. ಒಂದು ಅನಾಮಧೇಯ ಪತ್ರವನ್ನು ಬರೆಯಬೇಕೆಂದು ರಮೆಯು ಯೋಚಿಸಿ, ಅಮರನಾಥನ ಹೆಸರಿಗೆ ಈ ರೀತಿ ಬರೆದಳು—"ವೃದ್ಧ ವಿವಾಹವು ದೋಷಪೂರ್ಣವಾದುದು. ನೀವು ಇದನ್ನು ಗಮನಿಸಬೇಕು. ಇಲ್ಲವಾದರೆ ದೀನರ ಆರ್ತನಾದವು ಭಯಂಕರವಾದುದೆಂಬುದನ್ನು ನೆನಪಿನಲ್ಲಿಡಿ."

ಆದರೆ ವೃದ್ಧ ಅಮರನಾಥನು ಆ ಪತ್ರವನ್ನು ಗಮನಿಸಲಿಲ್ಲ.

— ೫ —

ನಾಳೆ ರಮೆಯ ವಿವಾಹ! ಅವಳು ಬಹಳ ಕೃಶಳಾಗಿ ಹೋಗಿದ್ದಾಳೆ.

ಮನೆಯಲ್ಲಿ ಗಡಿಬಿಡಿ. ಅತಿಥಿಗಳು ಬಂದಿದ್ದಾರೆ! ವಾದ್ಯಗಳ ಶಬ್ದ! ಆದರೆ ರಮೆಗೆ ಸ್ವಲ್ಪವೂ ಆನಂದವಿಲ್ಲ. ಅವಳು ವಿಚಾರ

ಸಾಗರದಲ್ಲಿ ಮುಳುಗಿದ್ದಾಗ, ಅವಳ ತಮ್ಮನು ಒಂದು ಲಕೋಟೆಯನ್ನು ತಂದುಕೊಟ್ಟನು ಅದು ಅವಳ ಅರ್ಜಿಯ ಉತ್ತರವಾಗಿತ್ತು. ಕೆಲಸ ದೊರೆತಿತ್ತು. ಒಂದು ವಾರದೊಳಗೆ ಕೆಲಸಕ್ಕೆ ಸೇರಬೇಕೆಂದಿತ್ತು! ತನ್ನ ಕಾಲಿನ ಮೇಲೆ ತಾನು ನಿಲ್ಲುವೆನೆಂಬ ಧೈರ್ಯವುಂಟಾಯಿತು!

ಆಕಾಶದಲ್ಲಿ ಮೋಡಗಳು ತುಂಬಿವೆ; ಸಣ್ಣ ಹನಿಗಳು ಬೀಳುತ್ತಿವೆ; ರಮೆಯ ಕಣ್ಣಿನಲ್ಲಿ ಸಹ ನೀರು ಹರಿಯುತ್ತಿದೆ. ಇದ್ದಕ್ಕಿದ್ದಂತೆಯೇ ಅವಳ ಮುಖಮಂಡಲವು ಪ್ರಸನ್ನತೆಯಿಂದ ಅರಳಿತು; ಅವಳ ಅಶ್ರುಪೂರ್ಣ ನೇತ್ರಗಳು ಪ್ರಕಾಶಗೊಂಡವು.

ವಿವಾಹಮಂಟಪವು ಅಲಂಕೃತವಾಗಿದೆ ವರ, ವಧು ಮತ್ತು ಪುರೋಹಿತರು ಎದುರುಬದುರಾಗಿ ಕುಳಿತಿದ್ದಾರೆ. ಪಂಡಿತ ದೀನಾನಾಥರು ಕನ್ಯಾದಾನಮಾಡಲು, ಮಂಟಪವನ್ನು ಪ್ರವೇಶಿಸಿದರು. ರಮೆಯು ಮೆಲ್ಲಗೆ ತನ್ನ ಮುಸುಕನ್ನು ತೆಗೆದಳು. ವಿವಾಹಮಂಟಪದಲ್ಲಿ ಇದ್ದಕ್ಕಿದ್ದಂತೆ ಏನೋ ಶಬ್ದವಾಯಿತು ನೆರೆದಿದ್ದವರೆಲ್ಲರೂ ಚಕಿತರಾಗಿ ನೋಡುತ್ತಾರೆ—ವರನ ತಲೆಯ ಮೇಲೆ ಜೋಡುಗಳು ಬೀಳುತ್ತಿವೆ. ಆದರೆ ಆಶ್ಚರ್ಯವೇನೆಂದರೆ, ಆ ಕೆಲಸವನ್ನು—ಅಪ್ರಿಯವಾದ ಆ ಕೆಲಸವನ್ನು—ಮತ್ಯಾರೂ ಮಾಡದೆ, ಸ್ವಯಂ ವಧುವೇ ಮಾಡುತ್ತಿದ್ದಾಳೆ! ೧೦-೧೫ ಏಟುಗಳನ್ನು ಹೊಡೆದು ರಮೆಯು ತನ್ನ ಕೈಯಲ್ಲಿದ್ದ ಹಳೇ ಜೋಡುಗಳನ್ನು ತನ್ನ ತಂದೆಯ ಮುಂದೆ ಎಸೆದು, ತಾನು ವೇಗವಾಗಿ ಹೊರಗೆ ಹೊರಟು ಹೋದಳು! ಯಾರೂ ಇದರಲ್ಲಿ ಪ್ರವೇಶಿಸುವುದಕ್ಕೆ ಅವಕಾಶವೇ ಇಲ್ಲದಂತೆ ನಡೆಯಿತು ಈ ಕೆಲಸ! ಭಾರತೀಯ ಬಾಲಕಿಯರ ಧೈರ್ಯ ಸ್ಥೈರ್ಯದ ಮೊದಲನೆ ಮಾದರಿಯಾಗಿತ್ತು ಇದು!

— ೭ —

ಈ ಆಶ್ಚರ್ಯ ಜನಕ ಘಟನೆಯ ವರದಿಯು ವೃತ್ತಪತ್ರಿಕೆಗಳಲ್ಲಿ ಪ್ರಕಟವಾಯಿತು ಪಂಡಿತ ಅಮರನಾಥನಿಗೆ ಎಲ್ಲಿಯೂ ಮುಖ ತೋರಿಸದಂತಾಯಿತು!

ನಗರದಲ್ಲೆಲ್ಲಾ ರಮಾದೇವಿಯನ್ನು ಪ್ರಶಂಸಿಸಲಾರಂಭಿಸಿದರು. 'ಎಂತಹ ಧೈರ್ಯಶಾಲಿಯಾದ ಹುಡುಗಿ! ಇಂತಹವರಿಂದಲೇ ಹಿಂದೂ ಜಾತಿಯು ಉಜ್ವಲಗೊಳ್ಳುವುದು'ಎಂದು ಹೊಗಳಲಾರಂಭಿಸಿದರು ಹಿತೈಷಿಗಳ ಪ್ರಶಂಸಾಪತ್ರಗಳು ನಿತ್ಯವೂ ಬರಹತ್ತಿದುವು. ಆದರೆ ಒಂದು ದಿನ ಬಹಳ ಬೆಲೆ ಬಾಳುವ ಒಂದು ಲಕೋಟೆಯು ಬಂದಿತು ಅದರಲ್ಲಿ ಒಂದು ಸಾವಿರ ರೂಪಾಯಿಗಳ ಒಂದು ನೋಟು ಇತ್ತು. ಮತ್ತು ಒಂದು ಕಾಗದದಲ್ಲಿ ಈ ಶಬ್ದಗಳಿದ್ದುವು....'ಕ್ಷಮೆ ಇರಲಿ!'....ಹೆಸರೇ ಇರಲಿಲ್ಲ ಆದರೆ ಪತ್ರ ಬರದವನನ್ನು ರಮೆಯು ಚೆನ್ನಾಗಿ ತಿಳಿದಿದ್ದಳು. ನೋಟನ್ನು ಹಿಂದಕ್ಕೆ ಕಳುಹಿಸುವುದು ಉಚಿತವಲ್ಲವೆಂದು ತಿಳಿದು ರಮೆಯು ಅದನ್ನು ಪಾಠಶಾಲೆಯ ಅಧಿಕಾರಿಗಳಿಗೆ ಕಳುಹಿಸಿ, ಬಡ ಹುಡುಗಿಯರಿಗಾಗಿ ವೆಚ್ಚ ಮಾಡಲು ತಿಳಿಸಿಬಿಟ್ಟಳು.

ಇಂದಿಗೂ ರಮೆಯು ಒಬ್ಬ ಯಶಸ್ವೀ ಅಧ್ಯಾಪಕಿಯಾಗಿದ್ದಾಳೆ. ತನ್ನ ಕೆಲಸವನ್ನು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸುತ್ತಾಳೆ. ಆಕೆಗೆ ತಿಂಗಳಿಗೆ ಎಂಭತ್ತು ರೂಪಾಯಿಗಳ ವೇತನವು ದೊರೆಯುತ್ತಿದೆ ಅವಳು ಮರಣ ಪರ್ಯಂತ ಅವಿವಾಹಿತಳಾಗೇ ಇದ್ದುಕೊಂಡು, ಸಮಾಜದ ಕುರೀತಿಗಳನ್ನು ಮೂಲೋತ್ಪಾಟನ ಮಾಡುವುದಾಗಿ ಪ್ರತಿಜ್ಞೆ ಮಾಡಿದ್ದಾಳೆ!

ಇಂತಹ ಬಾಲಕಿಯರೇ ದೇಶದ ಉಜ್ವಲ ತಾರೆಗಳು, ಇಂತಹ ಸತೀಮಣಿಗಳೇ ದೇಶದ ಕೀರ್ತಿಧ್ವಜವನ್ನು ಎತ್ತಿ ಹಿಡಿಯಬಲ್ಲವರು!

---

## ೪ ಕಾಕಜ್ಜಿ

ಬಾಬು ಗಂಗಾ ಪ್ರಸಾದರು ಅಲಹಾಬಾದಿನಲ್ಲಿದ್ದಾರೆ. ಅವರ ಪತ್ನಿಯ ಹೆಸರು ಚಂಪಾ, ಮಗಳ ಹೆಸರು ಮೇನಕೆ. ಅವರ ಮನೆಯಲ್ಲಿ ಒಬ್ಬ ದಾಸಿಯೂ ಇದ್ದಾಳೆ ಜನರು ಅವಳನ್ನು "ಕಾಕಜ್ಜಿ "ಎಂದು ಕರೆಯುತ್ತಾರೆ. ಗಂಗಾ ಪ್ರಸಾದರ ತಾಯಿಯು ಇವಳನ್ನು ಕೆಲಸಕ್ಕೆ ಇಟ್ಟುಕೊಂಡಿದ್ದರಂತೆ. ಅಂದಿನಿಂದಲೂ ಅವಳು ಮನೆಯವರ ಪೈಕಿ

ಒಬ್ಬಳಂತೆ ಇದ್ದಾಳೆ. ಮನೆಯವರೆಲ್ಲರೂ ಇವಳನ್ನು ಪ್ರೀತ್ಯಾದರಗಳಿಂದ ಕಾಣುತ್ತಾರೆ.

ಒಂದು ದಿನ ಸಂಜೆ ಮೇನಕೆಯು ತಂದೆಯ ತೊಡೆಯಲ್ಲಿ ಕುಳಿತು ಮಾತನಾಡುತ್ತ "ಅಪ್ಪಾ, ಅಪ್ಪ ನಂಗೊಂದು ಮೋಟಾಲ್ ತಂದ್ಕೊಡಪ್ಪ" ಎಂದಳು.

ತಂದೆ—"ಏನ್ಮಾಡ್ತಿಯಾ ಅದನ್ನು ತಗೊಂಡು?"

ಮೇನಕೆ—"ನಾನು, ಅಜ್ಜಿ ಅದರಲ್ಲಿ ಕೂತ್ಕೊಂಡು ಹೋಗ್ತೀವಿ. ನೀನು, ಅಮ್ಮಾ ಎಲ್ರೂ............"

ತಂದೆ "ಅಜ್ಜೀನಾ ಕರ್ಕೊಂಡು ಹೋಗೋದಿಲ್ಲ. ಆಗೇನ್ಮಾಡ್ತೀ ನೀನು?"

ಮೇನಕೆ—"ಆಗ ನಾನಳ್ತೀನಿ"

ಅಜ್ಜಿಯು ಹೊರಗಿಂದ ಬಂದ ಕೂಡಲೇ, ಮೇನಕೆಯು ಓಡಿ ಹೋಗಿ ಅವಳನ್ನು ಅಪ್ಪಿಕೊಂಡಳು. "ಅಜ್ಜಿ, ಅಪ್ಪ ನಿನ್ನ ಮೋಟಾಲಿನಲ್ಲಿ ಕರ್ಕೊಂಡು ಹೋಗೋಲ್ಲಂತೆ" ಎಂದಳು.

ಅಜ್ಜಿ —"ಪರ್ವಾ ಇಲ್ಲ, ನಾನು ಬರೋದಿಲ್ಲ"

ಮೇನಕೆ—"ನಿನ್ನ ಕೋತಿ ಹೊತ್ಕೊಂಡು ಹೋಗ್ತದೆ ಆ ಮೇಲೋ?"

ಅಜ್ಜಿಯು ಮಗುವನ್ನು ಅಪ್ಪಿಕೊಂಡಳು.

— ೨ —

ಅಯ್ಯೋ! ಬಡ ಮೇನಕೆ! ಇನ್ನೂ ಐದು ವರ್ಷ ಸಹ ಸುಖದಿಂದಿರುವುದಕ್ಕೆ ಮೊದಲೇ, ಚಂಪಾದೇವಿಯು ಸ್ವರ್ಗಸ್ಥಳಾದಳು. ಈಗಂತೂ ಅವಳಿಗೆ ಕಾಕಜ್ಜಿಯೇ ಸರ್ವಸ್ವವಾದಳು. ಅವಳು ಮೇನಕೆಯು ಕೇಳಿದ್ದನ್ನೆಲ್ಲ ಕೊಟ್ಟು, ಅವಳನ್ನು ತನ್ನ ಬಳಿಯಲ್ಲೇ ಇಟ್ಟುಕೊಂಡಿದ್ದಳು.

ಈಗ ಕಾಕಜ್ಜಿಯು ದಾಸಿಯಲ್ಲ, ಮನೆಯ ವೃದ್ಧಳಾದ ಯಜಮಾನಿ. ಅವಳು ಗಂಗಾ ಪ್ರಸಾದರ ಮತ್ತು ಮೇನಕೆಯ ಪೋಷಣೆಗೆ ಜವಾಬ್ದಾರಳು.

ಜನರು ಬಾಬು ಗಂಗಾ ಪ್ರಸಾದರಿಗೆ ಪುನರ್ವಿವಾಹ ಮಾಡಿಕೊಳ್ಳುವಂತೆ ಹೇಳುತ್ತಿದ್ದಾರೆ—ಮಗಳ ಪೋಷಣೆಯ ದೃಷ್ಟಿಯಿಂದಲಾದರೂ ಆಗುವಂತೆ ಹೇಳುತ್ತಿದ್ದಾರೆ. ಅವರೂ ಕೂಡ ಹಾಗೂ ಹೀಗೂ ಯೋಚಿಸಿ, ಮನೆಯನ್ನು ನೋಡಿಕೊಳ್ಳಲು ಒಬ್ಬಳು ಇರಲೇಬೇಕೆಂದೂ, ಮದುವೆ ಮಾಡಿಕೊಳ್ಳುವುದೇ ಒಳ್ಳೆಯದೆಂದೂ ಯೋಚಿಸಲಾರಂಭಿಸಿದರು.

— ೩ —

ಆಗುವದನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಗಂಗಾ ಪ್ರಸಾದರು ವಿವಾಹವಾದರು; ಹೊಸ ರಾಣಿಯು ಮನೆಗೆ ಬಂದಳು. ಅವಳು ಬಡವರ ಮನೆಯಿಂದ ಬಂದ ಹುಡುಗಿ, ತಾಯಿ ಮತ್ತು ಒಬ್ಬ ಸೋದರ ಇಬ್ಬರೇ ಇದ್ದವರು. ಅಕ್ಕನ ಜತೆಯಲ್ಲಿ ೧೦ ವರ್ಷದ ತಮ್ಮ ರಘುನಾಥನೂ ಬಂದನು. ಚಿಕ್ಕ ಮಹಾರಾಣಿಯು ಬಂದ ದಿನ ಬಾಬುಗಳು—“ಇದೇ ನಿನ್ನ ಮನೆ. ಮೇನಕೆಯು ನಿನ್ನ ಮಗಳು. ಮನೆ ಮತ್ತು ಮಗಳನ್ನು ಸರಿಯಾಗಿ ನೋಡಿಕೊಂಡಿರಬೇಕು” ಎಂದರು. ಇದೇ ರೀತಿ ಕೆಲವು ಕಾಲ ನಡೆಯಿತು.

ಮಹಾರಾಣಿಯು ಬಂದು ಇನ್ನೂ ಆರು ತಿಂಗಳಾಗಿಲ್ಲ; ಮೇನಕೆಯ ಮೇಲೆ ಆರೋಪಣೆಗಳಿಗೆ ಪ್ರಾರಂಭವಾಯಿತು ಮೊದಲು ಬಾಬು ಪ್ರಸಾದರು “ಅದಿನ್ನೂ ಹುಡುಗಿ ನೀನು ತಿಳಿದವಳು” ಎಂದು ಪತ್ನಿಗೆ ಹೇಳಿದರೂ ಹಗಲೂ ರಾತ್ರಿ ಏನಾದರೂ ಒಂದು ಚಾಡಿ, ಆರೋಪಣೆ ಇದ್ದೇ ಇತ್ತು. ಆ ಬಡಪಾಯಿಗೆ ಅಳುವುದೊಂದು ವಿನಹ ಬೇರೆ ಮಾರ್ಗವೆ ಇರಲಿಲ್ಲ.

ಕಾಕಜ್ಜಿಗೆ ಇವನ್ನು ನೋಡಿ ಸಹಿಸಲಾಗಲಿಲ್ಲ ಅವಳೇನಾದರೂ ಹೇಳಿದರೆ, ಅವಳಿಗೂ ಒಂದೆರಡು ಕಠಿಣೋಕ್ತಿಗಳೇ ದೊರೆಯುತ್ತಿದ್ದವು. ರಘುನಾಥನು ಮನಸ್ಸಿಗೆ ಬಂದದ್ದನ್ನು ತಿನ್ನುವನು, ಮನಸ್ಸಿಗೆ ಬಂದದ್ದನ್ನು ಮಾಡುವನು. ಆದರೆ ಮೇನಕೆಗೆ ಮನೆಯೊಳಗೆ ಹೋಗುವುದಕ್ಕೆ ಸಹ ಭಯವಾಗುತ್ತಿತ್ತು.

ಒಂದು ದಿನ ಆ ಬಾಲಕಿಯು ಸಂಜೆ ಊಟಮಾಡಬೇಕೆನ್ನಲು, ಮಹಾರಾಣಿಯು ಗದರಿಸಿ-"ಅಡಿಗೆ ಏಕೆ ಮಾಡ್ಕೋಬಾರ್ದು? ನೀನಿನ್ನೂ ಹುಡುಗಿಯೇನೋ ಪಾಪ! ಮಾಡಿಕೊಡಬೇಕೆನೋ?" ಎಂದು ಬಿಟ್ಟಳು.

ಕಾಕಜ್ಜಿ—"ಅವ್ವ, ಚಿಕ್ಕ ಮಗುವಿನ ಮನಸನ್ನೇಕೆ ಸಣ್ಣದು ಮಾಡುತ್ತಿರುವೆ? ಅದಕ್ಕಂತೂ ಭಗವಂತನೇ ದುಃಖ ಕೊಟ್ಟಿದ್ದಾನೆ—ಅವಳ ಭಾಗ್ಯ!"

ಮಹಾರಾಣಿ—ನೀನ್ಯಾಕೆ ಸಾಯ್ದೆ ಅವಳನ್ನು ಸಾಯಿಸ್ದೆ?"

ಕಾಕಜ್ಜಿ—"ಅಯ್ಯೋ ಹಾಗಾದ್ರೆ ಎಷ್ಟು ಚೆನ್ನಾಗಿತ್ತೋ! ಆದರೆ ನಮ್ಮ ಕೈಲಿಲ್ಲವಲ್ಲವ್ವಾ!"

ಮಹಾರಾಣಿ—"ನಂಗೆಲ್ಲಾ ಗೊತ್ತು ನಿನ್ವಿಚಾರ. ನೀನೇ ಆ ಹುಡುಗಿಯನ್ನು ಹಾಳ್ಮಾಡ್ತಿರೋಳು. ಬರ್ಲಿ, ತಡಿ ಅವರು, ಹೇಳ್ತೀನಿ, ಮನೆ ಕೆಲಸಕ್ಕೆ ನೀನೇ ಇದ್ದೆಯಲ್ಲ, ನನ್ನೇಕೆ ಮದುವೆ ಮಾಡಿಕೋ ಬೇಕಾಗಿತ್ತೂಂತ!"

ಅಷ್ಟರಲ್ಲಿ ಪ್ರಸಾದರು ಮನೆಗೆ ಬಂದರು. ಅವರನ್ನು ನೋಡಿ. ಮಹಾರಾಣಿಯು—"ನಿಮ್ಮ ಮಗಳು ಹಗಲು ರಾತ್ರಿ ನನ್ನ ಬೈತಿರ್ತಾಳೆ. ನೀವು ಬೇಡಾನ್ನೋದೇ ಇಲ್ಲ. ನೀವು ನಿಮ್ಮ ಮನೇನ ನೋಡ್ಕೊಳ್ಳಿ, ನಾನು ನನ್ಮನೆಗೆ ಹೋಗ್ತೀನಿ. ನೀವು, ನಿಮ್ಮಜ್ಜಿ, ನಿಮ್ಮಗಳು ಇದ್ಕೊಳ್ಳಿ"

ಬಾಬು ಪ್ರಸಾದರು ನೆಟ್ಟಗೆದ್ದು ಅಜ್ಜಿಯನ್ನು ಕರೆದು "ನೀನು ಮನೆಯಲ್ಲಿ ಹೀಗೇಕೆ ತೊಂದರೆಯುಂಟುಮಾಡ್ತಿಯಾ? ಯಾಕೆ, ಅವ ಳನ್ನು ಬೈಯ್ತೀಯಂತಲ್ಲ?" ಎಂದರು.

ಅಜ್ಜಿ—"ನಾನು ಏನೂ ಮಾತೇ ಆಡಲಿಲ್ಲವಲ್ಲ. ಆದರೆ ಒಂದು ಮಾತು, ಈ ಸಣ್ಣ ಮಗುವನ್ನು ಯಾರಾದರೂ ಬೈದ್ರೆ ಮಾತ್ರ ನನ್ನಿಂದ ಸಹಿಸಲಿಕ್ಕಾಗೋದಿಲ್ಲ. ಆದರೆ ನಾನು ಈ ಮನೆಯಲ್ಲಿರುವು ದರಿಂದ, ಜಗಳ ಆಗೋದಾದರೆ ನಾನೇ ಯಾಕೆ ಹೊರಟುಹೋಗ ಬಾರದು? ಇದುವರೆಗಂತೂ ಮೇನಕೆಗಾಗಿ ಇದ್ದೆ!"

ಮಹಾರಾಣಿ—"ನೀನು ಮುದುಕಿಯಲ್ಲ ವಿಷದ ಮೊಟ್ಟೆ. ನಾನಿರುವುದು ನಿನ್ನ ಕಣ್ಣಿಗೆ ಹೇಗೋ ಕಾಣುತ್ತೆ. ನಿನ್ನ ಕೈಲಾಗೋ ದಾದ್ರೆ ನಂಗೆ ವಿಷ ಕೊಡ್ತಿದ್ದೆಯೋ ಏನೋ."

ಯಜಮಾನರು ಯಾವ ಮಾತನ್ನೂ ಆಡಲೇ ಇಲ್ಲ. ಮುದುಕಿಯು ಹೊರಡಲು ಸಿದ್ಧಳಾದಳು. ಗಂಗಾಪ್ರಸಾದರ ಬಳಿ ಹೋಗಿ "ನಾನು ಹೊರಡುತ್ತೇನೆ. ನೀವು ಸುಖದಿಂದಿರಿ" ಎಂದಳು.

ಬಾಬು—"ನೀವೆಲ್ಲ ಶಾಂತಿಯಿಂದಿರಲು ಒಪ್ಪದೇ ಹೋದಲ್ಲಿ, ನಾನೇನು ತಾನೇ ಮಾಡಲಿ? ನಿನಗಾಗಿ ನನ್ನ ಮನೆಯಲ್ಲಿ ಜಗಳವಾಗುವುದು ನನಗೆ ಬೇಡ."

ನಂತರ ಅವಳು ಮೇನಕೆಯ ಬಳಿ ಹೋದಾಗ, ಅದು ಪ್ರಜ್ಞೆ ತಪ್ಪಿ ಬಿದ್ದಿತು. ಮುದುಕಿಯು ನೀರನ್ನು ಚಿಮುಕಿಸಲು, ಅದು ಪ್ರಜ್ಞೆ ತಿಳಿದು, ಕಾಕಜ್ಜಿಯ ಮಡಲಿನಲ್ಲಿ ತಲೆಯಿಟ್ಟು ರೋದಿಸಹತ್ತಿತು ಕಾಕಜ್ಜಿಯು ತಾನು ಹೊರಡುವ ಸುದ್ದಿಯನ್ನು ಅದಕ್ಕೆ ತಿಳಿಸಿರಲಿಲ್ಲ.

ಮೇನಕೆಯು ಹೆದರುತ್ತಾ "ಅಜ್ಜಿ ನೀನು ನನ್ನನ್ನು ಬಿಟ್ಟು ಹೊರಟು ಹೋಗುವೆಯಾ? ನಾನು ಹೇಗಿರ್ಲಿ?" ಎಂದಳು.

ಕಾಕಜ್ಜಿಯು ಅವಳನ್ನು ಅಪ್ಪಿಕೊಂಡು ಗದ್ಗದ ಕಂಠದಿಂದ ಹೇಳಿದಳು:—"ಮಗಳೇ, ನಾನು ನಿನ್ನನ್ನು ಬಿಟ್ಟು ಹೋಗುವುದಿಲ್ಲ. ನಾನು ಬದುಕಿರೋವರೆಗೆ ನಿನ್ನೊಡನೆಯೇ ಇರ್ತೀನಿ!"

ರಾತ್ರಿ ಯಜಮಾನರು ಮಲಗುವುದಕ್ಕೆ ಹೋಗಲು ಕಾಕಜ್ಜಿಯು ಸಮಯವನ್ನು ಸಾಧಿಸಿ ಅವರ ಬಳಿ ಹೋಗಿ ಹೇಗೆಂದಳು—"ನಾನು ನಿಮ್ಮಲ್ಲಿ ಒಂದು ಭಿಕ್ಷೆ ಬೇಡಲು ಬಂದಿದ್ದೇನೆ. ನಾನು ಇದುವರೆಗೆ ನಿಮ್ಮೊಡನಿದ್ದೆ. ಈಗ ಎಲ್ಲಿ ಹೋಗ್ಲಿ. ನಿಮ್ಮ ಬಳಿಯಲ್ಲೇ ಬಿದ್ದಿರಲವಕಾಶ ಕೊಡಿ. ನಿಮ್ಮ ಚರಣ ಸೇವೆಯಲ್ಲಿ ನನ್ನ ಜೀವನವನ್ನು ಕಳೆದಿದ್ದೇನೆ. ಈಗ ನನಗೆ ಬೇರೆ ಆಶ್ರಯ ಎಲ್ಲಿದೆ? ನೀವು ಕೊಟ್ಟ ಹಣವೇ ನನ್ನ ಬಳಿ ಇದೆ. ಜೀವನ ಹೇಗಾದ್ರೂ ನಡೆಯುವುದು. ಕೇವಲ ನಿಮ್ಮ ಪಾದ ಸೇವೆಯೊಂದನ್ನೆ ನಾನು ಬಯಸುವುದು."

ಕಾಕಜ್ಜಿಯ ಮುಖದಲ್ಲಿದ್ದ ಯಾಚನೆ, ದೈನ್ಯತೆಗಳನ್ನು ಕಂಡು, ಗಂಗಾಪ್ರಸಾದರು ಅವಳ ಪ್ರಾರ್ಥನೆಯನ್ನು ತಿರಸ್ಕರಿಸಲಾರದೆ

ಹೋದರು. ಅದರ ಮೇಲೆ ಬಿಟ್ಟ ಸೇವಕಿಯೊಬ್ಬಳು ಸಿಕ್ಕರೆ ಯಾರಿಗೆ ಬೇಡ?

ಮಹಾರಾಣಿ—"ಹಾಗಾದ್ರೆ ಅವಳು ಇಲ್ಲೇ ಇರ್ತಾಳೋ!"

ಪ್ರಸಾದ—"ಮತ್ತೆಲ್ಲಿ ಹೋದಾಳು? ನಿನ್ನನ್ನೇನೂ ಕೇಳೋದಿಲ್ಲ ಏನಾದರೂ ಅಲ್ಪ ಸ್ವಲ್ಪ ಕೆಲಸಾನೂ ಮಾಡ್ತಾಳೆ ಒಂದು ಮೂಲೇಲಿ ಬಿದ್ದಿರಲೆನ್ನು."

ಕಾಕಜ್ಜಿಯು ಮನೆಯಲ್ಲೇ ಬೇರೆ ಅಡಿಗೆ ಮಾಡಿಕೊಳ್ಳುತ್ತಾಳೆ ಮನೆಯಿಂದ ಏನನ್ನೂ ತೆಗೆದುಕೊಳ್ಳುವುದಿಲ್ಲ ಮನೆಯಲ್ಲೇ ಇದ್ದರೂ ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಮೇನಕೆಯು ತನಗೆ ಏನು ಬೇಕಾದರೂ ಅವಳನ್ನೇ ಕೇಳುತ್ತಿದ್ದಳು, ಅವಳೊಡನೆಯೇ ಮಾತ ನಾಡುತ್ತಿದ್ದಳು.

—೫—

ಗಂಗಾಪ್ರಸಾದರು ದಿನದಿನಕ್ಕೆ ಅತ್ಯಂತ ಕಠೋರ ಹೃದಯಿಗಳಾ ದರು. ತಮ್ಮ ಮಗಳ ವಿಚಾರವನ್ನೇ ಬಿಟ್ಟುಬಿಟ್ಟರು ಅವರಿಗೆ ಅವಳ ವಿವಾಹದ ಒಂದೇ ಚಿಂತೆ ಇದ್ದಿತು. ಅದೂ ಊರಿನವರು ನಗುವರಲ್ಲಾ ಎಂದು. ಆ ದಿನವೇ ಅವರು ಒಬ್ಬ ಹುಡುಗನನ್ನು ನೋಡಿಬಂದಿದ್ದರು. ಊಟಕ್ಕೇನೂ ಕೊರತೆ ಇರಲಿಲ್ಲ. ವರದಕ್ಷಿಣೆಯನ್ನೂ ಕೊಡಬೇಕಾ ಗಿರಲಿಲ್ಲ. ಅವರ ಪತ್ನಿಯು "ಮದುವೆಗೆ ಎಷ್ಟು ಖರ್ಚಾಗಬಹುದು? ಏನೇ ಆಗಲಿ. ನಾನು ಮಾತ್ರ ಒಂದೇ ಒಂದು ಕಾಸನ್ನು ಸಹ ಕೊಡ ಲಾರೆ, ನನಗೂ ಮುಂದಿನ ಯೋಚನೆಯಿಲ್ಲವೇ" ಎಂದಳು.

ಗಂಗಾಪ್ರಸಾರದರು –"ಹೀಗೇಕೆ ಮಾತನಾಡುವೆ? ನನ್ನನ್ನು ಈ ರೀತಿ ಕೊಲ್ಲಬೇಕೆಂದಿರುವೆಯಾ? ನಿನಗೆ ಮನಸ್ಸಿದ್ದರೆ ನನ್ನ ಮನೆಗೆ ಈಗಲೇ ಬೆಂಕಿ ಹಾಕ್ಬಿಡು. ಭಿಕ್ಷೆ ಬೇಡುವುದೇ ನನ್ನ ಹಣೆಯಲ್ಲಿ ಬರೆ ದಿದ್ದರೆ ಹಾಗೇ ಮಾಡಲು ಸಿದ್ಧನಿದ್ದೇನೆ"

ಗಂಗಾಪ್ರಸಾದರು ಮುಂದೇನು ಮಾಡಬೇಕೆಂದು ಯೋಚನೆ ಮಾಡಲಾರಂಭಿಸಿದರು. ಹಣವನ್ನು ದೊರಕಿಸುವುದೊಂದೇ ಅವರಿಗೆ

ದೊಡ್ಡ ಚಿಂತೆಯಾಯಿತು. ಈ ರೀತಿ ಚಿಂತೆಯಲ್ಲಿದ್ದಾಗ, ಕಾಕಜ್ಜಿಯು ಬಂದು "ಅಣ್ಣಾ, ಇಗೋ ಹಣವನ್ನು ತೆಗೆದುಕೊಳ್ಳಿ" ಎಂದಳು.

ಪ್ರಸಾದರು—"ಕಾಕಜ್ಜಿ, ನನಗೆ ನಿನ್ನ ಹಣ ಬೇಡ"

ಕಾಕಜ್ಜಿ—"ಇದೇನಣ್ಣ, ನಾನು ನೆರೆಮನೆಯವಳೇ? ನಿಮ್ಮನ್ನು ನನ್ನ ಸ್ವಂತ ಮಗನೆಂದೇ ತಿಳಿದಿದ್ದೇನೆ ನನ್ನ ಜೀವನವೆಲ್ಲ ನಿಮ್ಮ ಮನೆಯಲ್ಲೇ ಕಳೆದಿದೆ. ಯಾವಾಗ ಸಾಯುವೆನೋ ಏನೋ. ಮೇನಕೆಯು ನನ್ನ ಆತ್ಮದ ಅಂಗವೇ ಆಗಿದ್ದಾಳೆ. ನನ್ನ ಈ ಹಣವು ಅವಳ ಹಿತಕ್ಕೆ ವೆಚ್ಚವಾದರೆ, ನನ್ನ ಜೀವನವು ಸಾರ್ಥಕವಾಗುವುದು."

ಗಂಗಾಪ್ರಸಾದ್—"ನನ್ನ ಆತ್ಮವು ನನ್ನನ್ನು ಧಿಕ್ಕರಿಸುತ್ತಿದೆ. ನಾನು ತೀರ ನೀಚ. ನಿನ್ನ ಹಣವನ್ನು ತೆಗೆದುಕೊಂಡು ಮಗಳ ಮದುವೆಯನ್ನು ಮಾಡಲೇ?"

ಕಾಕಜ್ಜಿಯು ಅವರ ತಲೆಯ ಮೇಲೆ ಕೈ ಇಟ್ಟು ಈ ರೀತಿ ಹೇಳಿದಳು- "ಮಗನೇ, ನನ್ನಲ್ಲಿ ಲಜ್ಜೆ ಇಡುವುದು ಪಾಪಕರ! ನನ್ನ ಹಣ ಮಾತ್ರವಲ್ಲ, ನನ್ನ ದೇಹವೇ ನಿಮ್ಮ ಸೇವೆಗೆ ಸಿದ್ಧವಾಗಿದೆ. ನೀವು ಹಣ ತೆಗೆದುಕೊಳ್ಳದೆ ಹೋದರೆ, ನಾಳೆಯಿಂದ ನನ್ನ ಮುಖವನ್ನೇ ನೋಡಲಾರಿರಿ."

ಗಂಗಾ ಪ್ರಸಾದರು ಏನನ್ನೂ ಹೇಳಲಾರದೆ ಹೋದರು. ಜಗತ್ತಿನಲ್ಲಿ ಎಲ್ಲರೂ ಪ್ರೇಮಕ್ಕೆ ಶಿರಬಾಗಲೇ ಬೇಕು. ಬಾಬೂ ಗಂಗಾ ಪ್ರಸಾದರೂ ಸಹ ಇದೇ ರೀತೀ ಅಜ್ಜಿಯ ಪ್ರೇಮಕ್ಕೆ ತಲೆಬಾಗಿದರು. ಕಾಕಜ್ಜಿಯು ನೀರನ್ನು ತಂದು ತನ್ನ ಕೈಯಿಂದಲೇ ಗಂಗಾಪ್ರಸಾದರ ಮುಖವನ್ನು ತೊಳೆದು ಪ್ರೀತಿಯಿಂದ ಈ ರೀತಿ ನುಡಿದಳು:—

"ಮಗನೇ, ಏಳು, ಈ ಹಣವನ್ನು ಎಣಿಸಿಕೊ. ಬಹಳ ಹೊತ್ತಾಗಿ ಹೋಗಿದೆ. ಮಲಗುವ ಸಮಯವಾಯಿತು."

ಗಂಗಾಪ್ರಸಾದರು ಎದ್ದು ಹಣವನ್ನು ಎಣಿಸಿಕೊಂಡರು. ಅವರ ಕಣ್ಣಿನಲ್ಲಿ ನೀರು ತುಂಬಿತ್ತು. ಚಂಪಾ ದೇವಿಯು ಅವರೆದುರಿನಲ್ಲಿ ನಿಂತುಕೊಂಡು—ಇವಳು, ಈ ಕಾಕಜ್ಜಿಯು ನನ್ನ ಮತ್ತು ನಿಮ್ಮ

ಇಬ್ಬರ ಮಾತೆ--ಎಂದು ಹೇಳುತ್ತಿರುವಳೋ ಎಂಬಂತೆ ಅವರಿಗೆ ತೋರುತ್ತಿತ್ತು.

ಕಾಕಜ್ಜಿಯು ಅಲ್ಲಿಂದ ಹೊರಡುವಾಗ ಗಂಗಾಪ್ರಸಾದರು ಆಕೆಯ ಚರಣಗಳನ್ನು ಮುಟ್ಟಿ "ಕಾಕಜ್ಜಿ, ನಾನು ನಿನಗೆ ಬಹಳ ತೊಂದರೆಯನ್ನು ಕೊಟ್ಟೆನು. ಅದೆಲ್ಲವನ್ನೂ ದಯಮಾಡಿ ಕ್ಷಮಿಸಿಬಿಡು. ನೀನೇ ನನ್ನನ್ನು ಉದ್ಧಾರ ಮಾಡಿದವಳು, ಇಲ್ಲದಿದ್ದರೆ ನನ್ನ ಪಾಡು ನಾಯಿ ಪಾಡಾಗಿ ಹೋಗುತ್ತಿತ್ತು."



## ೫ ವಿಜಯ

ಮಾಲತಿಯು ಪತಿಯ ಪತ್ರವನ್ನು ಪ್ರಾಯಶಃ ನೂರೊಂದನೇ ಸಾರಿ ನಿಶ್ಚಲವಾದ ನೇತ್ರಗಳಿಂದ ಓದಿ, ಪುನಃ ಅದನ್ನು ನೋಡುವುದಿಲ್ಲವೆಂದು ಕಸಕ್ಕೆ ಬಿಸಾಡಿಬಿಟ್ಟಳು. ಅದು ಪ್ರೇಮ ಪತ್ರವೇ ಆಗಿದ್ದಲ್ಲಿ, ಅವಳದನ್ನು ಎರಡು ಮೂರು ಸಾರಿಗಿಂತ ಅಧಿಕವಾಗಿ ಓದುತ್ತಿರಲಿಲ್ಲ. ಆ ಪತ್ರವು ಪುರುಷ ಹೃದಯದ ಕಠೋರತೆ ಮತ್ತು ಸ್ವಾರ್ಥ, ನಾರೀ ಹೃದಯದ ಅವಮಾನ ಮತ್ತು ಪರಾಧೀನತೆಗಳಿಂದ ತುಂಬಿ ಹೋಗಿದ್ದಿತು. ಆವಳು ಆ ಪತ್ರವನ್ನು ಒಂದೇ ಬಾರಿ ಓದಿ ಸಂತುಷ್ಟಳಾಗದೆ, ಪುನಃ ಪುನಃ ಓದಿ ತನ್ನ ಹೃದಯದಲ್ಲಿ ಒಂದು ಹೊಸ ಆಘಾತದ ಅನುಭವವನ್ನು ಏಕೆ ಮಾಡಿಕೊಳ್ಳುತ್ತಿದ್ದಳೆಂಬುದನ್ನು, ಪತಿ ಕ್ರೋಧ ಪೀಡಿತಳಾದ ಆ ದುಃಖಿನಿಯನ್ನು, ಪತಿಯ ಕಠೋರವಾದ ಪದ ಪ್ರಹಾರಗಳಿಗೆ ಹೆದರಿ ಓಡಿ ಹೋಗುವುದು ತುಚ್ಛವೆಂದು ತಿಳಿದು, ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದ್ದ ಆ ಅಭಾಗಿನಿಯನ್ನೇ ಕೇಳಿ ತಿಳಿದುಕೊಳ್ಳಿ. ಪ್ರತಿಯೊಂದು ಆಘಾತವೂ ಆಕೆಯ ಆತ್ಮ ಸಮರ್ಪಣೆಯನ್ನು ಮತ್ತಷ್ಟು ವಿಹ್ವಲಗೊಳಿಸುವುದೋ ಎಂಬಂತಿತ್ತು. ಅಂದಿನಿಂದ ಪುನಃ ಪತ್ರಬರೆಯಕೂಡದೆಂದು, ಪತಿಯು ಆವಳಿಗೆ ಬರೆದಿದ್ದನು "ನಿನ್ನ ಮನಸ್ಸಿಗೆ ಬಂದಂತೆ ಮಾಡಿಕೊಳ್ಳಬಹುದು. ನೀನು ಜೀವಿಸಿದ್ದರೂ ಒಂದೇ, ಸತ್ತರೂ ಒಂದೇ, ಜೀವನ ನಿರ್ವಾಹವು ಅಸಾಧ್ಯವಾದರೆ

ಭಿಕ್ಷೆ ಬೇಡು ನಿನ್ನಂತಹ ಹೆಂಗಸಿಗಾಗಿ, ನಾನು ನನ್ನ ಜೀವನವನ್ನು ಹಾಳುಮಾಡಿಕೊಳ್ಳಬಯಸುವುದಿಲ್ಲ. ಹುಡುಗನನ್ನು ಗುರುಕುಲಕ್ಕಾದರೂ ಕಳುಹಿಸು, ನರಕಕ್ಕಾದರೂ ಕಳುಹಿಸು, ನನಗೇನೂ ಚಿಂತೆ ಇಲ್ಲ."

ಇದಕ್ಕಿಂತ ಹೆಚ್ಚಿನ ಆಘಾತವಿನ್ನೇನು ಬೇಕು? ಈ ಮಿತಿಮೀರಿದ ಕಠೋರತೆಯನ್ನು ಕಂಡಾಗ ಅವಳ ಹೃದಯದಲ್ಲಿ ಒಂದು ಹೊಸ ಸ್ಫೂರ್ತಿಯೇ ಉಂಟಾಗುತ್ತಿತ್ತು. ಅವಳು ಈಗ ತನ್ನ ಸ್ವಾಮಿಯು ತಾನೇ ಆಗಿದ್ದಾಳೆ; ಯಾರೂ ಅವಳನ್ನು ಕೇಳುವವರೇ ಇಲ್ಲ. ಅವಳು ಸತ್ತರೂ ಯಾರೂ ಚಿಂತಿಸುವಂತಿಲ್ಲ—ಎಂಬ ಭಾವನೆಯು ಆಕೆಯ ಆತ್ಮದಲ್ಲಿ ಒಂದು ವಿಧವಾದ ಶಕ್ತಿಯನ್ನುಂಟುಮಾಡಿತು ಅಷ್ಟರಲ್ಲಿ ಆಕೆಯ ಅತ್ತೆ ರಾಜಕುಮಾರಿಯು ಅವಳ ಹತ್ತಿರ ಬಂದು- "ನಿನ್ನ ಗಂಡನು ಏನು ಬರೆದಿದ್ದಾನಮ್ಮ?" ಎಂದು ಕೇಳಿದಳು. ಮಾಲತಿಯು ತಲೆಯನ್ನು ತಗ್ಗಿಸಿ, "ಕ್ಷೇಮವಾಗಿದ್ದಾರಂತೆ" ಎಂದು ಹೇಳಿದಳು.

"ಈ ರಜದಲ್ಲಿಯೂ ಬರುವುದಿಲ್ಲವೇ?"

"ಅದನ್ನೇನೂ ಬರೆದಿಲ್ಲ"

"ನಿನ್ನನ್ನು ಬಾ ಎಂದು ಬರೆದೂ ಇಲ್ಲವೇ?"

"ನನಗೆ ಆ ರೀತಿಯ ಆಶೆಯೇ ಇರಲಿಲ್ಲ"

"ರಾಮೂನ ಕರಕೊಂಡು ಹೋಗ್ತಾನಂತೋ?"

"ಅವರಿಗೆ ಗಂಡು ಹೆಣ್ಣು ಮಕ್ಕಳೇ ಇಲ್ಲವೆಂದೂ, ಯಾರು ಸತ್ತರೂ ಅವರಿಗೆ ಏನೂ ಇಲ್ಲವೆಂದೂ ಬರೆದಿದ್ದಾರೆ."

"ಅಯ್ಯೋ, ದೇವರೇ! ಏನಾಯಿತಪ್ಪ ಅವನಿಗೆ?"

"ಅವರಿಗೇನೂ ಆಗಿಲ್ಲಮ್ಮಾ, ಅವರಿಂದ ಇನ್ನು ಏನನ್ನೂ ನಿರೀಕ್ಷಿಸಲಾಗದು. ನಾಳೆ ರಾಮುವನ್ನು ಅನಾಥಾಲಯಕ್ಕೆ ಕಳುಹಿಸಬೇಕೆಂದು ನಿಶ್ಚಯಿಸಿದ್ದೇನೆ. ನಾನು ವಿಧವಾಶ್ರಮಕ್ಕೆ ಹೋಗಿ ಕಾಲ ಕಳೆಯುವೆನು."

ನಂತರ ಅತ್ತೆ—ಸೊಸೆಯರಿಬ್ಬರೂ ರೋದಿಸಹತ್ತಿದರು.

— ೨ —

ಮುನ್ನಿ ಭಗವತೀ ಪ್ರಸಾದರು ಶಹಜಹಾನ್ಪುರದ ಪ್ರಸಿದ್ಧ ವಕೀಲರು. ಅವರಿಗೆ ಒಳ್ಳೆ ಜಮೀನನ್ನು ಕೊಳ್ಳಬೇಕೆಂಬ ಆಸೆ ಬಹಳ ಇತ್ತು. ಕೈಯಲ್ಲಿ ಹಣವಿಲ್ಲದಿದ್ದರೆ ಸಾಲಮಾಡಿ ಭೂಮಿಯನ್ನು ಕೊಂಡುಕೊಳ್ಳುತ್ತಿದ್ದರು. ಈ ರೀತಿ ಅವರಿಗೆ ೩೦–೪೦ ಸಾವಿರ ರೂಪಾಯಿ ಸಾಲವಿತ್ತು. ಅವರಿಗೆ ಗಣಪತಿ ಮತ್ತು ಶ್ಯಾಮನಾಥ ಎಂಬ ಇಬ್ಬರು ಮಕ್ಕಳಿದ್ದರು. ಗಣಪತಿಗೆ ಮಾಲತಿಯೆಂಬ ಹುಡುಗಿಯೊಡನೆ ವಿವಾಹವಾಗಿ ಹೋಗಿತ್ತು. ಇನ್ನು ಹೆಚ್ಚಿನ ವೆಚ್ಚವಾವುದೂ ಇರಲಿಲ್ಲ ೩೦–೪೦ ಸಾವಿರ ಸಾಲವನ್ನು ತೀರಿಸುವುದೇನೂ ಅವರಿಗೆ ಕಷ್ಟವಾಗಿರಲಿಲ್ಲ. ಆದರೆ ಅಕಾಲ ಮರಣವು ಬಂದು ಅವರ ಆಸೆಗಳೆಲ್ಲವನ್ನು ಮಣ್ಣುಗೂಡಿಸಿ ಬಿಟ್ಟಿತು. ಅವರು ಮೃತಪಟ್ಟ ಕೂಡಲೆ ಹಣ ಕೊಟ್ಟವರು ದಾವೆ ಮಾಡಿದರು. ಆಸ್ತಿ ಎಲ್ಲವೂ ಹೋಯಿತು. ಮನೆಯೊಂದೇ ಉಳಿಯಿತು. ಗಣಪತಿಯು ಅದೇ ವರ್ಷ B. A ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದನು. ಇಂಗ್ಲೆಂಡಿಗೆ ಹೋಗಬೇಕೆಂಬ ಕನಸು ಕಾಣುತ್ತಿದ್ದನು. ಆದರೆ ಜೀವನದ ಸಮಸ್ಯೆಯೇ ಮುಖ್ಯವಾಯಿತು. ಆದರೂ ಸುದೈವದಿಂದ, ಅವನ ಪ್ರಿನ್ಸಿಪಾಲರ ಸಿಫಾರಸಿನಿಂದ ಒಳ್ಳೆ ಕೆಲಸ ದೊರೆಯಿತು ಶ್ಯಾಮನಾಥನನ್ನು ಕರೆದುಕೊಂಡು ಹೊರಟನು. ತನ್ನ ಪತ್ನಿ ಮಾಲತಿಯಲ್ಲಿ ಪ್ರೇಮವಿರಲಿಲ್ಲವಾದುದರಿಂದ, ಅವಳನ್ನು ಕರೆದುಕೊಂಡು ಹೋಗಲಿಲ್ಲ. ಮಾಲತಿ ಕಳೆದ ಮೂರು ವರ್ಷಗಳಿಂದಲೂ ಅತ್ತೆಯ ಸೇವೆಯಲ್ಲಿ ನಿರತಳಾಗಿ ತನ್ನ ದುಃಖೀ ಜೀವನವನ್ನು ನೂಕುತ್ತಿದ್ದಾಳೆ. ಗಣಪತಿಯು ರಜದಲ್ಲಿ ಮನೆಗೆ ಬಂದರೂ, ಮಾಲತಿಗೆ ರೋದಿಸುವುದು ವಿನಹ ಬೇರೆ ಏನೂ ದೊರೆಯುತ್ತಿರಲಿಲ್ಲ. ಅವಳು ಕುರೂಪಿಯಾಗಿರಲಿಲ್ಲ. ಆದರೆ ಅಷ್ಟು ಹೆಚ್ಚಿನ ರೂಪವತಿಯೂ ಆಗಿರಲಿಲ್ಲ. ಅವಳು ಇಂಗ್ಲಿಷನ್ನು ಕಲಿತಿರಲಿಲ್ಲವಾಗಿ, ಗಣಪತಿಯು ಅವಳನ್ನು ದೂರ ಮಾಡಿಬಿಟ್ಟನು. ಮಾಲತಿಯು ನಿರಾಶಳಾಗಿ ಈ ರೀತಿ ಬರೆದಳು—"ನಿಮಗೆ ಮಕ್ಕಳ ವಿಷಯದಲ್ಲಿ ಈ ರೀತಿ ಅನಾದರಣೆ ಇದ್ದರೆ, ಅವುಗಳನ್ನು ಯಾವುದಾದರೂ ಅನಾಥಾಲಯಕ್ಕಾದರೂ ಏಕೆ ಕಳುಹಿಸುವುದಿಲ್ಲ?"

— ೩ —

ಗಣಪತಿಗೆ ಜಗತ್ತಿನಲ್ಲಿ ಮತ್ತೇನೂ ಬೇಕಾಗಿರಲಿಲ್ಲ. ಅವನಿಗೆ ತನ್ನ ಜೀವನವನ್ನು ಸಾರ್ಥಕಗೊಳಿಸಲು ಇದ್ದ ಒಂದೇ ಒಂದು ಉಪಾಯ ವೆಂದರೆ, ಯಾರಾದರೂ ಸ್ತ್ರೀಯನ್ನು ತನ್ನ ಪ್ರೇಮದ ಆಧಾರವನ್ನಾಗಿ ಮಾಡಿಕೊಳ್ಳುವುದೇ ಆಗಿತ್ತು. ಮತ್ತೊಂದು ವಿವಾಹವನ್ನು ಮಾಡಿ ಕೊಳ್ಳುವುದರಲ್ಲಿ ಸಫಲತೆಯು ದೊರೆಯಲಿಲ್ಲ. ಕೊನೆಗೆ ಹಸನ್‌ಬೀ ಎಂಬ ಒಬ್ಬ ವೇಶ್ಯೆಯೊಡನೆ ಅವನ ಸಂಬಂಧವುಂಟಾಗಿ ಅವಳಲ್ಲೀ ಆನಂದದಿಂದಿರಲಾರಂಭಿಸಿದನು.

ಆದರೆ ಇನ್ನೂ ಆರು ತಿಂಗಳು ಕಳೆಯುವುದಕ್ಕೆ ಮೊದಲೇ ಗಣಪತಿ ರಾಜುನು ರೋಗಗ್ರಸ್ತನಾದನು. ಅನೇಕರಿಗೆ ದೊರೆಯುವ ವೇಶ್ಯಾಗ ಮನದ ಫಲವೇ ಅವನಿಗೂ ದೊರೆತು, ಅವನು ಒಂದು ತಿಂಗಳಿಂದಲೂ ಹಾಸಿಗೆ ಹಿಡಿದಿದ್ದಾನೆ. ಹಗಲು ರಾತ್ರಿ ನರಳುತ್ತಿದ್ದಾನೆ. ಹಸನ್‌ಬೀಗೆ ನರ್ತನ, ಗಾನಗಳಿಗೆ ಸಮಯ ಸಾಲದುದರಿಂದ ಇವನನ್ನು ವಿಚಾರಿಸಿ ಕೊಳ್ಳಲವಕಾಶವಿಲ್ಲ. ಬರಬರುತ್ತಾ ಅವನಿಗೆ ಹಾಸಿಗೆಯಿಂದ ಏಳುವ ಶಕ್ತಿ ಸಹ ಇಲ್ಲದೆ ಸಂಕಟಪಡಲಾರಂಭಿಸಿದ. ಅವನ ಬಳಿ ಇದ್ದ ಹಣ ವೆಲ್ಲ ವೇಶ್ಯೆಯರಿಗೆ ಅರ್ಪಿಸಲ್ಪಟ್ಟಿದ್ದುದರಿಂದ ಚಿಕಿತ್ಸೆ ಮಾಡಿಸಿಕೊಳ್ಳಲು ಹಣವಿರಲಿಲ್ಲ. ಒಂದು ದಿನ ಹಸನ್‌ಬೀ ಅಲಂಕಾರ ಮಾಡಿಕೊಂಡು ಹೊರಗೆ ಹೊರಡುವುದರಲ್ಲಿದ್ದಾಗ, ಗಣಪತಿರಾಯನು ಅವಳನ್ನು ಕರೆದು ತಾನು ಅವಳೊಡನೆ ಕೆಲವು ಮಾತುಗಳನ್ನಾಡಬೇಕಾಗಿದೆ ಎಂದನು.

ಹಸನ್‌ಬೀ—"ಸಿನೆಮಾಕ್ಕೆ ಹೋಗಿ ಬಹಳ ದಿನಗಳಾದುವು ಮನಸ್ಸಿಗೆ ಬಹಳ ಬೇಜಾರಾಗಿದೆ. ಸ್ವಲ್ಪ ಹೋಗಿ ಮನರಂಜನೆ ಮಾಡಿಕೊಂಡು ಬರ್ತೀನಿ."

ಗಣಪತಿ—"ಹಸನ್‌ಬೀ, ನಾನು ಇಲ್ಲಿ ನರಳುತ್ತಾ ಬಿದ್ದಿರೋದು, ನೀನು ಮಜಾಮಾಡೋದು, ಇದೇ ನಿನ್ನ ಧರ್ಮವೇ?"

ಹಸನ್‌ಬೀ—"ಸ್ವಲ್ಪ ಕೇಳ್ರೀ ಸಾಮಿ, ನಾನೇನೂ ಹಿಂದೂ ಹೆಂಗಸಲ್ಲ. ಯಾವಾಗಲೂ ನಿಮ್ಮ ಹತ್ತಿರಾನೇ ಕುಳಿತಿರೋಕೆ. ನಾನೊಬ್ಬ ವೇಶ್ಯೆ. ಎರಡು ತಿಂಗಳಿಂದ ನೀವು ಹಾಸಿಗೆಹಿಡಿದಿದ್ದರೂ

ನಾನು ನಿಮ್ಮನ್ನು ಬಿಟ್ಟುಹೋಗಲಿಲ್ಲ. ಇದೇನು ಸ್ವಲ್ಪ ಅಂತ ತಿಳಿದಿರಾ?"

ಗಣಪತಿ—"ನೀನು ಬಹಳ ನಿಷ್ಕರುಣಿ. ನಾನು ಸಾಯುತ್ತಾ ಬಿದ್ದಿರೋದನ್ನು ನಿನ್ನ ಕಣ್ಣಿಂದಲೇ ನೋಡ್ತಾ ಹೀಗನ್ತೀಯಲ್ಲ. ನಾನು ಸತ್ತ ಮೇಲೂ ಸಹ ನಿನಗಾಗಿ ಏನೂ ಆಸ್ತಿ ಬಿಟ್ಟುಹೋಗಲಿಲ್ಲ ಅಂತಿಯೋ ಏನೋ!"

ಹಸನ್‌ಬೀ—"ನಾನು ಮೊದಲೇ ಹೇಳಲಿಲ್ಲವೇ, ನಾನೊಬ್ಬ ವೇಶ್ಯೆ ಎಂದು. ನೀವು ಸತ್ತರೆ ನಿಮ್ಮಂತಹವರು ನನಗೆ ಬೇಕಾದಷ್ಟು ಮಂದಿ ದೊರ್‍ತೀ ದೊರೀತಾರೆ. ನಿಮ್ಮ ಸುಖದುಃಖದಲ್ಲಿ ನಿಮ್ಮೊಡನೆ ಇರಲು ನಾನೇನು ನಿಮ್ಮ ಹೆಂಡ್ತೀ ಅಂತಾ ತಿಳಿದಿರಾ? ನಾನು ನಿಮಗಾಗಿ ಅಳುವವಳಾಗಿದ್ದರೆ, ವೇಶ್ಯೆಯಾಕಾಗ್ತಿದ್ದೆ?"

ಗಣಪತಿ—(ಸಿಟ್ಟಿನಿಂದ) "ಹಾಗಾದರೆ ಸಲಾಂ ತಕೊ. ಈಕ್ಷಣ ಇಲ್ಲಿಂದ ಹೊರಡು. ಪುನಃ ನಿನ್ನ ಮುಖವನ್ನು ತೋರಿಸೀಯೇ, ಜೋಕೆ!"

ಹಸನ್‌ಬೀಗೂ ಸಿಟ್ಟುಬಂದು ಹೀಗೆಂದಳು—"ನಾನು ಆ ರೀತಿ ಸುಮ್ಮನೆ ಹೋಗೋಳಲ್ಲ ನೀವು ಇಷ್ಟು ದಿನ ನನ್ನ ಜೀವನವನ್ನು ಹಾಳುಮಾಡಿದ್ದೀರಿ, ಸುಮ್ಮನೇ ಹೋಗುವೆನೇ?"

ಗಣಪತಿ—(ಹಲ್ಲನ್ನು ಕಡಿಯುತ್ತ) "ಹಾಗಾದರೆ ನನ್ನ ಪ್ರಾಣವನ್ನು ತೆಗೆದು ಕೊಂಡೇ ಹೋಗುವೆಯಾ?"

ಹಸನ್‌ಬೀ—"ನಿಮ್ಮ ಪ್ರಾಣ ತಗೊಂಡು ನಾನು ನೆಕ್ಕಲೇ? ನಿಮ್ಮ ಈ ವರ್ತನೆಗೆ ಸರಿಯಾದ ಪಾಠ ಕಲಿಸಿ, ಪುನಃ ನೀವು ಯಾರೊಡನೆಯೂ ಈ ರೀತಿ ವರ್ತಿಸದಂತೆ ಮಾಡುವೆನು."

ಈ ರೀತಿ ಹೇಳಿ, ಹಸನ್‌ಬೀಯು ತನ್ನ ಕಾಲಿನ ಮೆಟ್ಟನ್ನು ತೆಗೆದುಕೊಂಡು ೫-೬ ಏಟುಗಳನ್ನು ಹಾಕಿ ಹೊರಗೆ ಹೋದಳು ಶ್ಯಾಮುವು ಇದನ್ನು ನೋಡಿದನು

— ೪ —

ಅನೇಕ ದಿನಗಳಿಂದ ಶ್ಯಾಮುವು ಒಬ್ಬನೇ ಅಣ್ಣನ ಸೇವೆಯನ್ನು ಮಾಡುತ್ತಿದ್ದಾನೆ; ಮಲಮೂತ್ರಗಳನ್ನು ಸಹ ತೆಗೆದು ಹಾಕುತ್ತಿದ್ದಾನೆ,

ಆದರೂ ಬಾಬು ಸಾಹೇಬರ ಮನಸ್ಸು ಕರಗಿಲ್ಲ. ದಿನದಿನಕ್ಕೆ ವೆಚ್ಚವು ಹೆಚ್ಚುತ್ತಿದೆ. ನೌಕರರಿಗೆ ಸಂಬಳವು ಸರಿಯಾಗಿ ದೊರೆಯದಿರಲು, ಅವರು ಮನೆಕಡೆ ಹೊರಟರು.

ಒಂದು ದಿನ ಶ್ಯಾಮುವು—"ಅಣ್ಣಾ, ಹಣವಿಲ್ಲ, ಏನು ಮಾಡುವುದು?" ಎಂದು ಕೇಳಿದನು.

ಗಣಪತಿ—"ಇದ್ದ ಹಣವೆಲ್ಲ ಏನಾಯ್ತು?"

ಶ್ಯಾಮು –"ನಾನೇನೂ ಲೆಕ್ಕ ಬರೀಲಿಲ್ಲ?"

ಗಣಪತಿ—(ಸಿಟ್ಟಿನಿಂದ) "ಏಕೆ ಬರೀಲಿಲ್ಲ? ಬಿಟ್ಟಿ ಬಂದೀತ್ತೂ ಅಂತ ತಿಳ್ಕೊಂಡಿದ್ದೀ ಏನೋ! ನೀನೂ ಹಾಳಾಗಿ ಹೋಗು ಇಲ್ಲಿಂದ. ನನಗೆ ಯಾರೂ ಬೇಡ."

ಶ್ಯಾಮು - (ಹೆದರಿ) "ನಿಷ್ಕಾರಣವಾಗಿ ಏಕೆ ಸಿಟ್ಟುಗೊಳ್ಳುವಿರಿ?"

ಗಣಪತಿ –"ಮನೆಬಿಟ್ಟು ಹೋಗೂಂತ ಹೇಳ್ಬಿಟ್ನಿಲ್ಲಾ. ಸುಮ್ಮನೆ ಕುಳಿತು ತಿಂದು, ಪುನಃ ಕಾನೂನು ಹೇಳಲಿಕ್ಕೆ ಬರ್‍ತಾನೆ. ಎಲ್ಲಾರೂ ಹೋಗಿ ಸಂಪಾದಿಸಿ ತಿನ್ನೋಕೇಕಾಗೋದಿಲ್ಲ?"

ಶ್ಯಾಮು—"ಆ ಹಾಳು ಸೂಳೆ ಹಣವನ್ನೆಲ್ಲ ದೋಚಿಕೊಂಡು ಹೋದ್ರೂ, ಏನೂ ಹೇಳಲೇ ಇಲ್ಲವಲ್ಲಾ!"

ಗಣಪತಿ—(ಕ್ರೋಧದಿಂದ ಉನ್ಮತ್ತನಾಗಿ) "ನಿಂಗೆ ತಲೆ ತಿರುಗಿ ಹೋಗಿದೇಂತಾ ಕಾಣುತ್ತೆ. ಒಳ್ಳೆ ಮಾತಿನಲ್ಲಿ ತೊಲಗುವೆಯೋ ಇಲ್ಲವೋ?"

ಶ್ಯಾಮುವು ಆಕ್ಷಣ ಮನೆಬಿಟ್ಟು ಹೊರಟ.

— ೫ —

ಗಣಪತಿರಾಯನ ಬಾಯಿಗೆ ೪ ದಿನಗಳಿಂದ ಒಂದು ತೊಟ್ಟು ನೀರನ್ನೂ ಸಹ ಯಾರೂ ಹಾಕಿಲ್ಲ. ಮನೆಯಲ್ಲಿ ಬೇರೆ ಯಾರೂ ಇರಲೂ ಇಲ್ಲ. ಅವನು ವೇಶ್ಯೆಯ ಅಪನಂಬಿಕೆಗಾಗಿ ಅಳಬೇಕೇ ಅಥವಾ ಶ್ಯಾಮೂವಿನ ಸಿಟ್ಟಿಗಾಗಿ ವ್ಯಸನಪಡಬೇಕೇ? ಇಲ್ಲವೆ ಮಾಲತಿಯನ್ನು ಉಪೇಕ್ಷಿಸಿದ್ದಕ್ಕಾಗಿ ವ್ಯಥೆಪಡಬೇಕೇ? ಈಗ ಅವನ ಕಣ್ಣು ತೆರೆಯಿತು ಮಾಲತಿಯ ಪ್ರೇಮದ ಬೆಲೆಯನ್ನು ತಿಳಿಯಲಾರಂಭಿಸಿದ.

ಜೀವನವು ವಿಲಾಸ, ಭೋಗ, ಆನಂದಗಳ ಆಗರವೇ ಆಗಿದ್ದಲ್ಲಿ, ವೇಶ್ಯೆಯ ಪರದೆಯು ಮುಚ್ಚಿರುತ್ತಿತ್ತು. ಆದರೆ ಜೀವನದಲ್ಲಿ ಆಪತ್ತು, ತೊಂದರೆಗಳೂ ಬರುತ್ತವೆ. ಈಗ ಮಾಲತಿಯನ್ನು ನೆನಸಿಕೊಳ್ಳು ವನು, ಆದರೂ ಆವಳಿಗೆ ಪತ್ರ ಬರೆಯುವ ಸಾಹಸವಿರಲಿಲ್ಲ. "ಹಾ! ಮಾಲತಿ! ವಿಲಾಸಿಯಾಗಿ ನಿನ್ನ ಬೆಲೆಯನ್ನರಿಯಲಾರದೆ ಹೋದೆನು! ನೀನು ನನಗಾಗಿ ನಿನ್ನ ಪ್ರಾಣವನ್ನೇ ಕೊಡಲು ಸಿದ್ಧಳಿದ್ದೆ, ನಾನು ನಿನ್ನನ್ನು ಅರಿಯಲಾರದೆ ಹೋದೆನಲ್ಲಾ!"

ಇದ್ದಕ್ಕಿದ್ದಂತೆ ಒಬ್ಬ ಯುವಕನು ಬಂದು ನಮುಸ್ಕಾರ ಮಾಡಿದನು ಗಣಪತಿರಾಯನು ಅವನ್ಯಾರು? ಏಕೆ ಬಂದನೆಂದು ಕೇಳಿದನು.

ಯುವಕ - (ಗಾಳಿ ಬೀಸುತ್ತಾ) "ಬಾಬುಗಳೇ, ಕ್ಷಮಿಸಿ, ನಾನು ಸೇವಾಸಮಿತಿಯ ಒಬ್ಬ ಸೇವಕನು. ಶ್ಯಾಮುವನ್ನು ಚೆನ್ನಾಗಿ ಬಲ್ಲೆ. ಅವರು ನಿಮ್ಮ ಸೇವೆಯನ್ನು ಮಾಡುವಂತೆ ಹೇಳಿಹೋದರು. ನಿಮ್ಮ ಸಹಾಯಕ್ಕೆ ಯಾರೂ ಇಲ್ಲವೆಂದು ನನಗೆ ಈ ದಿನ ಮಾತ್ರ ತಿಳಿಯಿತು. ನನ್ನನ್ನು ತಮ್ಮ ದಾಸನನ್ನಾಗಿ ಮಾಡಿಕೊಳ್ಳಿ."

ಗಣಪತಿ—"ಸೇವಾಸಮಿತಿಯ ಈ ಕಾರ್ಯವು ಪ್ರಶಂಸನೀಯ ವಾದುದು. ತಾವೆಲ್ಲಿರುವುದು?"

ಯುವಕ—"ಇಲ್ಲೇ ಬೋರ್ಡಿಂಗ್ ಹೌಸ್‌ನಲ್ಲಿದ್ದೇನೆ. ಆದರೆ ತಮಗೆ ಸಂಪೂರ್ಣವಾಗಿ ಗುಣವಾಗುವ ವರೆಗೆ ಇಲ್ಲಿಂದ ಕದಲುವುದಿಲ್ಲ".

ಗಣಪತಿ—"ತಮ್ಮ ಕೃಪೆ"

— ೬ —

ಈ ಯುವಕನು ತನ್ನ ಹೆಸರು ಜಯನಾಥನೆಂದು ಹೇಳಿದನು. ಆವನು ಗಣಪತಿರಾಯನ ಸೇವೆಯನ್ನು ಮನಃಪೂರ್ವಕವಾಗಿ ಮಾಡಿ ದನು. ತನ್ನ ಊಟದ ಚಿಂತೆಯನ್ನೂ ದೂರಮಾಡಿ ಸೇವೆ ಸಲ್ಲಿಸಿದನು. ಗಣಪತಿರಾಯನು ಅವನನ್ನೂ ಆಗಾಗ ಬೈಯ್ಯುತ್ತಿದ್ದರೂ ಅವನು ಅದನ್ನು ಗಮನಿಸುತ್ತಿರಲಿಲ್ಲ. ಔಷಧಿಗಳೆಲ್ಲಕ್ಕೂ ಕೂಡ ಅವನೇ ವೆಚ್ಚ ಮಾಡಿದನು ಗಣಪತಿರಾಯನ ಬಳಿ ಒಂದು ಕಾಸೂ ಇರಲಿಲ್ಲ, ಒಂದು

ದಿನ ವೈದ್ಯರು ಬಂದು ಸಂಪೂರ್ಣ ಗುಣವಾಗಿರುವುದೆಂದೂ ತಮ್ಮ ಕೆಲಸಕ್ಕೆ ಹೋಗಬಹುದೆಂದೂ ಗಣಪತಿರಾಯನಿಗೆ ಹೇಳಿದರು.

ಸಂಜೆ ಜಯನಾಥನು ಬಂದು ಹೀಗೆಂದನು– "ಬಾಬೂಜಿ, ನನಗೆ ಈಗ ಅಪ್ಪಣೆ ಕೊಡಿ. ಬೇರೆ ಅರ್ಥ ಮಾಡಿಕೊಳ್ಳುವುದಿಲ್ಲವಾದರೆ, ಒಂದು ಸಲಹೆ ಕೊಡುತ್ತೇನೆ. ತಾವು ನನಗಿಂತ ದೊಡ್ಡವರು. ಆದರೂ ಸಣ್ಣವರ ಮಾತನ್ನು ಕೇಳುವುದರಿಂದ ಏನೂ ನಷ್ಟವಿಲ್ಲ."

ಗಣಪತಿರಾಯ—(ಸ್ನೇಹದಿಂದ) "ಇಲ್ಲ, ನೀವು ನನ್ನನ್ನು ಮರಣ ದಿಂದ ಉಳಿಸಿದಿರಿ ನನ್ನ ಪ್ರಾಣವನ್ನು ಕೇಳಿದರೂ ಕೂಡ ಕೊಡಬಲ್ಲೆ. ನನ್ನ ತಮ್ಮನು ಸಹ ಈ ರೀತಿ ಶುಶ್ರೂಷೆ ಮಾಡಲಾರನು. ಅವನಂತೂ ಓಡಿಹೋದನಲ್ಲ. ಪತಿಪರಾಯಣೆಯಾದ ಸ್ತ್ರೀಯೊಬ್ಬಳು ಮಾಡುವ ಸೇವೆಯನ್ನು ನೀವು ಮಾಡಿದ್ದೀರಿ."

ಜಯನಾಥ—(ನಗುತ್ತ) "ಇನ್ನು ಮೇಲಾದರೂ ಕುಲಟೆಯರ ಬಲೆಗೆ ಬೀಳಬೇಡಿರೆಂದೇ ನನ್ನ ಪ್ರಾರ್ಥನೆ."

ಗಣಪತಿ—"ಪ್ರಮಾಣವಾಗಿ ಆ ರೀತಿ ಮಾಡುವುದಿಲ್ಲ, ಆದರೆ ನೀವು ಎಲ್ಲಿಗೆ ಹೋಗೋದು? ನನ್ನ ಬಳಿಯಲ್ಲೇ ಇರಬಾರದೇಕೆ? ನನ್ನ ಬಳಿ ಇದ್ದು ನನ್ನ ಸೇವೆಯನ್ನು ಸ್ವಲ್ಪ ಸ್ವೀಕರಿಸಬಾರದೇಕೆ? ನಿಮ್ಮನ್ನು ಬಿಡಲು ಮನಸ್ಸೇ ಇಲ್ಲ. ದೇವರ ಇಚ್ಛೆ ಇದ್ದರೆ, ಈ ಸಾರಿ ಫಸ್ಟ್‌ಕ್ಲಾಸಿನಲ್ಲಿ ಪಾಸ್ ಮಾಡಿಸುವೆನು"

ಜಯನಾಥ—"ತಮ್ಮ ಕೃಪೆ! ಆದರೆ ನಾನು ಹೋಗಲೇ ಬೇಕಾ ಗಿದೆ. ಯಾವಾಗಲಾದರೂ ಸ್ಮರಿಸಿಕೊಳ್ಳುತ್ತಿರಿ. ಅದಿರ್ಲಿ, ಅತ್ತಿಗೆ ಯವರನ್ನೇಕೆ ಕರೆಸಿಕೊಳ್ಳಬಾರದು? ಒಬ್ಬರೇ ಇದ್ದರೆ ತೊಂದರೆ ಯಾಗೋದಿಲ್ವೆ?"

ಗಣಪತಿ—"ಕರೆಸಿಕೊಳ್ಳೋಣ ಎಂದು ಮನಸ್ಸೇನೋ ಇದೆ. ಆದರೆ ಅವಳು ಬರುವ ಆಶೆ ಇಲ್ಲ."

ಜಯ—(ಆಶ್ಚರ್ಯದಿಂದ) "ಏನ್ಮಾತೂಂತ ಹೇಳ್ತೀರಿ. ನಮ್ಮ ಹಿಂದೂ ಸ್ತ್ರೀಯರು ಪತಿಗೆ ಪ್ರಾಣವನ್ನಾದರೂ ಅರ್ಪಿಸುವರು. ತಮ್ಮ ಪತ್ರ ಮುಟ್ಟಿದ ಕೂಡಲೆ, ಅವರು ಸಂತೋಷದಿಂದ ಓಡಿಬರುವರೆಂಬ

ವಿಶ್ವಾಸವಿದೆ. ತಾವು ತಮ್ಮ ಅನಾರೋಗ್ಯದ ವಿಷಯದಲ್ಲಿ ಅವರಿಗೆ ಕಾಗದ ಬರೆಯಲೇ ಇಲ್ಲವೇ?"

ಗಣಪತಿ—"ನಾನಂತೂ ಬರೆಯಲಿಲ್ಲ, ಆದರೆ ಶ್ಯಾಮುವು ಹೋಗಿ ಹೇಳಬಹುದು."

"ಆದರೂ ಬರಲಿಲ್ಲವೇ?"

"ನಾನೇ ಅವಳ ಸ್ಥಾನದಲ್ಲಿದ್ದಿದ್ದರೆ, ಗಂಡನ ಮುಖವನ್ನು ಎಂದಿಗೂ ನೋಡುತ್ತಿರಲಿಲ್ಲ. ನೀವಿನ್ನೂ ಚಿಕ್ಕ ವಯಸ್ಸಿನವರು, ಇನ್ನೂ ತಿಳುವಳಿಕೆ ಇಲ್ಲ. ನಾನು ಅವಳಿಗೆ ಕೊಟ್ಟಿರುವ ತೊಂದರೆಯನ್ನು ನಾನೊಬ್ಬನೇ ಬಲ್ಲೆ. ಅದೆಲ್ಲವನ್ನೂ ಸ್ಮರಿಸಿಕೊಂಡರೆ, ವಿಷಪಾನ ಮಾಡಬೇಕೆಂದೆನಿಸುತ್ತದೆ. ನಿಮ್ಮ ಅತ್ತಿಗೆಯು ಸುಂದರಳಲ್ಲ, ಈಗಿನ ಕಾಲದ ಬೆಡಗುಗಾತಿಯೂ ಅಲ್ಲ, ವಿದ್ಯಾವಂತಳೂ ಅಲ್ಲ. ಅದಕ್ಕೇ ನಾನು ಅವಳನ್ನು ದೂರಮಾಡಿ ಬಿಟ್ಟದ್ದು. ಒಂದು ದಿನವೂ ಅವಳೊಡನೆ ನಗುತ್ತಾ ಮಾತಾಡಿದವನಲ್ಲ. ಅವಳಲ್ಲಿದ್ದ ಒಳ್ಳೆಯ ಗುಣಗಳನ್ನು ಗಮನಿಸಲೇ ಇಲ್ಲ. ನನ್ನನ್ನು ವೇಶ್ಯೆಯು ಮೋಸಪಡಿಸಿ ಹೋದಾಗಲೇ ನನಗೆ ಅವಳ ಬೆಲೆಯು ಗೊತ್ತಾದುದು. ಆಗಲೇ ಸ್ತ್ರೀಯರಲ್ಲಿರುವ ಅತ್ಯಮೂಲ್ಯವಾದ ವಸ್ತುವ್ಯಾವುದೆಂದು ನನಗೆ ತಿಳಿದುದು."

"ಅದೇನೆಂಬುದನ್ನು ದಯವಿಟ್ಟು ನನಗೂ ತಿಳಿಸಿದರೆ, ಅದರಿಂದ ಮುಂದಕ್ಕೆ ಪ್ರಯೋಜನವಾದರೂ ಆಗಬಹುದು."

ಗಣಪತಿಯು ಗಂಭೀರ ಭಾವದಿಂದ "ಆತ್ಮ ಸಮರ್ಪಣೆಯೇ ಅತ್ಯಮೂಲ್ಯವಾದ ವಸ್ತು ಸ್ತ್ರೀಯರಿಗೆ. ಆತ್ಮಸಮರ್ಪಣೆಯ ಮೂಲಕವೇ ಸ್ತ್ರೀಯು ಪುರುಷನನ್ನು ಆಳಬಲ್ಲಳು. ರೂಪ, ಲಾವಣ್ಯದಿಂದ ಮನಕ್ಕೆ ಉತ್ತೇಜನ ದೊರೆತರೂ ಅದು ಕೇವಲ ಕ್ಷಣಿಕವಾದುದು. ಆತ್ಮಕ್ಕೆ ಸಂತೋಷವಾಗುವುದಾದರೆ ಆತ್ಮ ಸಮರ್ಪಣೆಯಿಂದಲೇ. ಪುರುಷನಲ್ಲಿ ಇದರೊಡನೆ ಪೌರುಷ ಶಕ್ತಿಯೂ ಬೇಕಾಗುತ್ತದೆ. ಮಾಲತಿಯನ್ನು ಬರಮಾಡಿಕೊಳ್ಳೋಣವೆಂಬ ಮನಸ್ಸಾದರೂ, ಆ ರೀತಿ ಮಾಡುವ ಸಾಹಸ ಮಾತ್ರ ನನ್ನಲ್ಲಿಲ್ಲ. ನಾನು ಅವಳಿಗೆ ಬರೆದ ಒಂದು ಪತ್ರವನ್ನು

ಸ್ಮರಿಸಿಕೊಂಡರೆ, ನನ್ನ ಹೃದಯವು ಬಿರಿದು ಹೋಗುತ್ತದೆ. ಅದನ್ನು ಬರೆದ ನಂತರ, ನನಗೆ ಮಾಲತಿಯಿಂದ ಸಾಹಾನುಭೂತಿಯನ್ನು ಹೊಂದುವ ಅಧಿಕಾರವೇ ಇಲ್ಲ- ಹೋಗಿ ಆಕೆಯ ಚರಣಗಳಿಗೆ ಬೀಳಲೇ ಎನ್ನಿಸುತ್ತದೆ. ಪ್ರಾಯಶಃ ಅವಳಿಗೆ ದಯೆಬಂದರೂ ಬರಬಹುದು. ಸಾಕು, ಇದೇ ನನಗೆ ಉಳಿದಿರುವ ಆಧಾರ."

"ಬಾಬೂಜಿ, ತಾವು ಹಾಗೆ ಮಾಡುವಿರಾದರೆ, ಬೆಲೆ ಕೊಡದೇ ನಿಮ್ಮ ಗುಲಾಮನಾಗಿ ಬಿಡುತ್ತೇನೆ. ನನ್ನನ್ನೂ ಸಂಗಡ ಕರೆದು ಕೊಂಡು ನಡೆಯಿರಿ."

"ಮತ್ತೂ ಒಪ್ಪದೇ ಹೋದರೆ, ಎಲ್ಲ ದೋಷವು ನನ್ನ ಮೇಲೆ ಹೊರಿಸಲ್ಪಡುವುದಲ್ಲ. ದೇವಿಯು ನನ್ನನ್ನು ಕೊಂದರೂ ಕೊಲ್ಲ ಬಹುದು".

"ನಿಜ ಹೇಳಲೇನ್ರೀ, ಮಾಲತಿ ದೇವಿಯು ಇಲ್ಲೇ ಇದ್ದಾಳೆ ನಾನು ಮಾಡಿದ ಸೇವೆಗೆಲ್ಲ ಆಕೆಯೇ ಸಹಾಯ ಮಾಡಿದವಳು".

ಗಣಪತಿರಾಯನು ಎದ್ದು "ಮೊದಲೇ ಏಕೆ ಹೇಳಲಿಲ್ಲ? ಮಾಲತಿ ಎಲ್ಲಿದ್ದಾಳೆ? ದಯವಿಟ್ಟು ಬೇಗ ತೋರಿಸಿ. ನೀವೂ ಒಳ್ಳೆ ವಿಚಿತ್ರ ಪ್ರಾಣಿಯೇ! ಮಾಲತಿಯು ಇಲ್ಲೇ ಇದ್ದೂ ನೀವು ನನಗೆ ತಿಳಿಸ ಬಾರದೇ?"

"ಅವಳು ಇಲ್ಲಿಗೆ ಎಷ್ಟೋ ಸಲ ಬಂದುಹೋಗಿದ್ದಾಳೆ! ಎಷ್ಟೋ ಗಂಟೆಗಳ ವರೆಗೆ ತಮ್ಮ ಬಳಿ ಕುಳಿತು ಹೋಗಿದ್ದಾಳೆ! ತಮಗೆ ಗುರುತೇ ಸಿಗಲಾರದೆ ಹೋದರೆ, ಆಕೆಯ ದೋಷವೇನಿದೆಯೋ ನಾಕಾಣೆ!"

"ಏನು! ಮಾಲತಿ ನನ್ನ ಬಳಿ ಇದ್ದಳೆ? ಏನ್ಮಾತಾಡ್ತೀರ್ರೀ?"

"ಹೌದು, ಒಂದಲ್ಲ ನೂರು ಸಲ ಬಂದಿದ್ದಳು"

"ಮತ್ತು ನಾನು ಗುರುತಿಸಲಾರದೆ ಹೋದೆ! ಭೇಷ್!"

ನೀವು ಅವಳನ್ನು ಮರೆತಿರುವಿರೇನೋ!"

"ಹೋಗಲಿ, ಈಗೆಲ್ಲಿದ್ದಾಳೆ?"

"ಇಲ್ಲೇ ಇದ್ದಾಳೆ; ಮನೆಯಲ್ಲೇ ಇದ್ದಾಳೆ!"

"ಈಗಲೂ ಇಲ್ಲೇ?"

"ಹೌದು, ಇಲ್ಲೇ."

ಗಣಪತಿರಾಯನು ಒಳಗೆ ಓಡಿದನು. ತಕ್ಷಣ ಜಯನಾಥನು ಅಂಗಿ, ಟೋಪಿಯನ್ನು ತೆಗೆದು ಬಿಸಾಡಿದ, ಸೀರೆಯನ್ನುಟ್ಟ, ಈಗ ಜಯನಾಥನೇ ಮಾಲತಿ! ಮಾಲತಿಯು ಮುಂದಸ್ಮಿತ ವದನದಿಂದ ಪತಿಯ ಬಳಿ ಓಡಿದಳು.

ಗಣಪತಿ ರಾಯನು ನಿರಾಶರಾಗಿ ಒಳಗಿಂದ ಬರುತ್ತಿದ್ದ. ಮಾಲತಿ ಯನ್ನು ನೋಡಿದೊಡನೆಯೇ ಆಶ್ಚರ್ಯಚಕಿತನಾಗಿ "ಎಲ್ಲಿದ್ದೆ?" ಎಂದು ಕೇಳಿದ.

ಮಾಲತಿ-(ನಗುತ್ತ) "ತಮ್ಮೊಡನೆ ಮಾತನಾಡುತ್ತಿದ್ದವರ್ಯಾರು?"

ಗಣಪತಿರಾಯನು ಪತ್ನಿಯನ್ನು ಎದೆಗಪ್ಪಿಕೊಂಡು ಹೇಳಿದ. "ಓಹೋ! ಇದೆಲ್ಲವೂ ನಿನ್ನ ಲೀಲೆಯೋ? ನಾನು ನಿನ್ನನ್ನು ೨೪ ಗಂಟೆ ಕಾಲ ನೋಡುತ್ತಲೇ ಇದ್ದರೂ, ನಿನ್ನನ್ನು ಗುರುತಿಸಲಾರದೆ ಹೋದೆ ನಲ್ಲಾ! ಅಯ್ಯೋ!"

---

## ೬ ಮಾತೆ

ರಾಧಾರಾಣಿಯು ತನ್ನ ಪತಿಯಾದ ಜಾಲಿಂಸಿಂಹನಿಗೆ ಹೇಳಿದಳು- "ನೀವು ಜನರನ್ನು ಈ ರೀತಿ ಏಕೆ ಹೊಡೆಯುವಿರಿ? ಇಷ್ಟೇಕೆ ಹಿಂಸೆ ಮಾಡುತ್ತಿರುವಿರಿ? ಸ್ವಾತಂತ್ರ್ಯಕ್ಕಾಗಿ ಪ್ರತಿಯೊಂದು ಮಗುವೂ ಪ್ರಯತ್ನ ಪಡುತ್ತದೆ. ಅಲ್ಲದೆ ನೀವು ಸ್ವತಃ ನಿಮ್ಮ ಹೊಟ್ಟೆಯ ಪಾಡಿಗಾಗಿ ಗುಲಾಮರಾಗಿದ್ದೀರಿ. ಇತರರನ್ನೂ ಸಹ ಗುಲಾಮರನ್ನಾಗಿ ಮಾಡ ಲೇಕೆ ಯತ್ನಿಸುವಿರಿ?"

ಇದೇನೂ ಹೊಸ ವಿಷಯವಲ್ಲ; ಪ್ರತಿದಿನವೂ ರಾಧಾರಾಣಿಯು ಪತಿಗೆ ಈ ರೀತಿಯಾದ ಉಪದೇಶವನ್ನು ಕೊಡುತ್ತಲೇ ಇದ್ದಳು. ಆದರೆ ಪರಿಣಾಮ ಮಾತ್ರ ಏನೂ ಆಗಲಿಲ್ಲ. ರಾಧಾ ಪುನಃ ಹೇಳಿದಳು. "ಧರ್ಮ ಮತ್ತು ಮನುಷ್ಯತ್ವವಾದರೂ ಬೇಡವೆ? ಮನುಷ್ಯನಲ್ಲಿ ಮನುಷ್ಯತ್ವವಿಲ್ಲ ದಿದ್ದರೆ, ಅವನು ಮನುಷ್ಯನೇ ಅಲ್ಲ. ಹೊಟ್ಟೆಗಾಗಿ ಧರ್ಮವನ್ನೇ ಬಿಡು ವುದೇ?"

"ನಾನು ಮಾಡುವುದೇ ನನ್ನ ಧರ್ಮ!"

"ಕಳ್ಳರನ್ನೂ, ಬದ್ಮಾಷ್‌ಗಳನ್ನೂ ಹಿಡಿಯುವುದು, ಬಡವರನ್ನು ಕಷ್ಟದಿಂದ ಬಿಡುಗಡೆಮಾಡುವುದು, ದೇಶದಲ್ಲಿ ಶಾಂತಿಯನ್ನು ಸ್ಥಾಪಿಸುವುದು, ಇವೇ ನಿಮ್ಮ ಕೆಲಸ"

"ನಾನು ಮಾಡ್ತಾ ಇರೋದೇನು?"

"ಗುಲಾಮಗಿರಿ, ಮತ್ತು ಅತ್ಯಾಚಾರ! ಅಸಹಯೋಗಿಗಳ ಮೇಲೆ ಸುಳ್ಳು ಆರೋಪಣೆಗಳನ್ನು ಹೊರಿಸಿ, ಸುಳ್ಳುಸಾಕ್ಷಿ ನುಡಿಯುತ್ತೀರಿ...."

ಜಾಲಿಂಸಿಂಹನಿಗೆ ವಿಪರೀತ ಸಿಟ್ಟು ಬಂತು. ತನ್ನ ಪತ್ನಿಯು ಇವತ್ತೂ ಹದ್ದುಮೀರಿ ಹೋಗಿದ್ದಳು. ಸಾಹುಕಾರನ ಮನೇ ದ್ವಾರದ ಬಳಿ ಭಿಕ್ಷುಕನು ಭಿಕ್ಷೆ ಬೇಡಿದರಂತೂ ಸರಿ; ಆದರೆ ಅವನು ಆ ಸಾಹುಕಾರನ ಹಣದ ಚೀಲಕ್ಕೆ ಕೈಹಾಕಿದರೆ ಸಾಹುಕಾರನು ಸುಮ್ಮನಿರುವನೇ? ರಾಧೆಯು ಈ ದಿನ ಆ ರೀತಿ ಮಾಡಿದ್ದಳು. ಜಾಲಿಂಸಿಂಹನು ಸಿಟ್ಟಾಗಿ ನುಡಿದನು: "ಸಾಕು, ನಿಲ್ಲಿಸು ನಿನ್ನ ಉಪದೇಶವನ್ನು! ನನಗೇನೂ ಬೇಡ ನಿನ್ನ ಬುದ್ಧಿವಾದ! ವಸಂತನು ಈ ಸಾರಿ M. A. ಆಗುವನು. ಅಧಿಕಾರಿಗಳನ್ನು ತೃಪ್ತಿ ಪಡಿಸದೆ ಹೋದರೆ ಅವನನ್ನು ಕೇಳುವವರ್ಯಾರು? ಮನುಷ್ಯನಿಗೆ ತನ್ನ ಪರಿವಾರದವರ ಯೋಗಕ್ಷೇಮ ತಾನೇ ಮುಖ್ಯ! ಜಾತಿ ಮತ್ತು ದೇಶಕ್ಕಾಗಿ, ಮನೆಯನ್ನು ಹಾಳುಮಾಡಿಕೊಳ್ಳುವುದು ಮೂರ್ಖತನವಲ್ಲವೇ? ವಸಂತನಿಗೆ ಒಳ್ಳೆ ಕೆಲಸ ದೊರೆತರೆ ನಾನೂ ನೀನೂ ಸುಖವಾಗಿರಬಹುದಲ್ಲವೇ? ನೀನು ಯಾವ ಪುಣ್ಯಕ್ಷೇತ್ರಕ್ಕೆ ಬೇಕಾದರೂ ಹೋಗಬಹುದು. ಅದನ್ನು ಬಿಟ್ಟು ವ್ಯರ್ಥವಾದ ಜಗಳಗಳನ್ನು ಕಟ್ಟಿಕೊಂಡು ಭವಿಷ್ಯವನ್ನೇಕೆ ಹಾಳುಮಾಡಿಕೊಳ್ಳಬೇಕು?"

ರಾಧೆಯು ಸುಮ್ಮನಾದಳು. ಅವಳು ವೃದ್ಧಳಾಗದೆ ಇದ್ದಲ್ಲಿ ಸಿಟ್ಟಿನಿಂದ ತವರೂರಿಗೆ ಹೋಗಿಬಿಡುತ್ತಿದ್ದಳು.

— ೨ —

ಕತ್ತಲಾದ ಮೇಲೆ ವಸಂತಸಿಂಹನು ಮನೆಗೆ ಬರಲು, ಜಾಲಿಂಸಿಂಹನು- "ಈ ದಿನ ಇಷ್ಟು ತಡವೇಕೆ ಮಾಡಿದೆ?" ಎಂದು ಕೇಳಿದನು.

ವಸಂತಸಿಂಹ—ಶಾಲೆಯಲ್ಲಿ ಒಂದು ರಾಷ್ಟ್ರೀಯ ಚರ್ಚೆ ನಡೆಯುತ್ತಿತ್ತು; ಆದುದರಿಂದ ತಡವಾಯಿತು.

ಜಾಲಿಂಸಿಂಹ—(ಸಿಟ್ಟಿನಿಂದ) ಈ ವಿಷಯಕ್ಕೆ ಕೈಹಾಕಬೇಡ ಎಂದು ನಿನಗೆ ಎಷ್ಟು ಸಲ ಹೇಳೋದು?

ವಸಂತ—ನನ್ನ ಜೊತೆಯವರೆಲ್ಲರೂ ಸ್ವಯಂಸೇವಕರಾಗಿರುವಾಗ, ನಾನು ಹೇಗೆ ತಾನೇ ಸುಮ್ಮನಿರಲಿ?

ಜಾಲಿಂ—ಹಾಗಾದರೆ ನೀನು ಸ್ವಯಂಸೇವಕನಾಗಿ ಬಿಟ್ಟಿಯಾ? ನನ್ನನ್ನು ಕೇಳದೆ ಹೇಗೆ ಆದೆ?

ವಸಂತ—ನನ್ನ ಇಚ್ಛೆಯಂತೆ ನಡೆಯಬೇಡವೇ?

ಜಾಲಿಂ—ಈಗಲೇ ನಿನಗೆ ಸ್ವಾತಂತ್ರ್ಯ ಬೇಕೇನೋ? ಮೂರ್ಖ! ಅಧಿಕಾರಿಗಳಿಗೆ ತಿಳಿಯಿತೂ ಅಂದ್ರೆ, ನಿನ್ನನ್ನು ಮನೆಬಿಟ್ಟು ಓಡಿಸಿಬಿಟ್ಟೇನು; ಆಗ ಗೊತ್ತಾಗುವುದು ನಿನಗೆ ನಿಜಸ್ಥಿತಿ! ಮನುಷ್ಯನಿಗೆ ಹೊಟ್ಟೆ ತುಂಬ ಸಿಕ್ಕಿದಾಗಲೇ ಎಲ್ಲ ವಿಷಯಗಳೂ ಹೊಳೆಯುವುವು.

ವಸಂತ— (ಆತ್ಮಾಭಿಮಾನದಿಂದ) ಹೊಟ್ಟೆಗಾಗಿ ಮನುಷ್ಯನು ಪರಿಶ್ರಮ ಪಡುವುದೇನೋ ಸರಿ. ಆದರೆ ತತ್ವಗಳನ್ನು ಕೊಲೆಮಾಡಬಾರದು. ಕಾಲೇಜಿನ ವಿದ್ಯಾರ್ಥಿಗಳೆಲ್ಲ ತಮ್ಮ ಹೆಸರನ್ನು ಬರೆಯಿಸುವಾಗ, ನಾನೊಬ್ಬನೇ ಹಿಂದೆ ಬಿದ್ದಿರ್ಲೇ? ನಾನೂ ಮನುಷ್ಯನಲ್ಲವೇ?

"ಈಕ್ಷಣ ಹೋಗಿ ನಿನ್ನ ಹೆಸರನ್ನು ತೆಗೆಸಿ ಬಾ. ಇಲ್ಲವಾದರೆ, ಈ ಹಠದ ಫಲವು ಕೆಟ್ಟದಾಗುವುದು. ನಿನ್ನ ಸಿದ್ಧಾಂತಗಳಿಗಾಗಿ, ನಾನು ನನ್ನ ಜೀವನವನ್ನು ಹಾಳುಮಾಡಿಕೊಳ್ಳಲಾರೆನು."

"ನಾನೆಲ್ಲಿ ಹೇಳಿದೆ, ನನಗಾಗಿ ನಿಮ್ಮ ಜೀವನವನ್ನು ಹಾಳ್ಮಾಡಿಕೊಳ್ಳೀ ಎಂದು. ನಾನಿಲ್ಲಿರುವುದರಿಂದ, ನಿಮ್ಮ ಜೀವನವು ಹಾಳಾಗುವುದಾದರೆ, ನಾನು ಈಗಲೇ ಎಲ್ಲಿಗಾದರೂ ಹೊರಟುಹೋಗಿಬಿಡುತ್ತೇನೆ. ನಾನು ಸತ್ತರೂ ಒಬ್ಬರ ಕೆಳಗೆ ಇರಲಾರೆ."

ತನ್ನ ಇತರ ಸಹೋದ್ಯೋಗಿಗಳಂತೆ ಜಾಲಿಂಸಿಂಹನೂ ಕೂಡ ಕಠಿಣ ಹೃದಯದ ವ್ಯಕ್ತಿಯೇ ಆಗಿದ್ದ. ತನ್ನ ಅಧಿಕಾರಿಗಳೆದುರಿನಲ್ಲಿ ಅವನು ನಾಯಿಯಂತೆ ಬಾಲವನ್ನು ಅಲ್ಲಾಡಿಸುತ್ತಿದ್ದರೂ, ತನ

ಅಧೀನದಲ್ಲಿದ್ದವರು ಮತ್ತು ಆಶ್ರಿತರೆದುರಿನಲ್ಲಿ ಸಿಂಹದಂತೆ ಗರ್ಜಿಸುತ್ತಿದ್ದ. ಅವನು ಕೆಳತುಟಿಯನ್ನು ಹಲ್ಲಿನಿಂದ ಅದುಮಿಕೊಂಡು ಗರ್ಜಿಸಿದ: "ಹಾಗಾದರೆ ನಡೀಮನೆಬಿಟ್ಟು. ಸತ್ತೇಂತ ತಿಳಿದುಕೊಳ್ತೀನಿ. ನಿನ್ನಂತಹ ಅಯೋಗ್ಯ ಹುಡುಗನು ಇರೋದಕ್ಕಿಂತ ಇಲ್ಲದೆ ಇರೋದೇ ಒಳ್ಳೇದು."

ರಾಧಾರಾಣಿಯು ಒಳಕ್ಕೆ ಬಂದು "ಇದೇನು, ಮಗುವನ್ನೇಕೆ ಬಯುತ್ತಿರುವಿರಿ? ಸಿಟ್ಟಂತೂ ಎಲ್ಲರಿಗೂ ಬಂದೇ ಬರುತ್ತದೆ; ಆದರೆ ಹೀಗೆ ಸಿಟ್ಟಾಗೋದೇ?" ಎಂದಳು.

ಜಾಲಿಂಸಿಂಹ—ಇದೆಲ್ಲ ನೀನು ಮಾಡಿದ್ದೆ! ನೀನೂ ನಿನ್ನ ಮಗನೂ ಸೇರಿ ಸ್ವರಾಜ್ಯ ತಂದೇ ಬಿಡ್ತೀರಿ! ಸ್ವರಾಜ್ಯ ದೊರೆಯದೆ ಹೊಟ್ಟೆಗಿಲ್ಲದೆ ಸಾಯಬೇಕಾಗುತ್ತೆ ಅನ್ನೋದು ಇನ್ನೂ ನಿನಗೆ ತಿಳೀದೂಂತ ಕಾಣುತ್ತೆ. ಈಗೇನೋ ಖಾದಿಬಟ್ಟೆ ಚೆನ್ನಾಗಿ ಕಾಣಬಹುದು. ಆದರೆ ಪೋಲೀಸರ ಲಾಠೀ ಹೊಡೆತ ಬಿತ್ತೂ ಅಂದ್ರೆ, ಆಗ ತಿಳಿಯುವುದು ರುಚಿ!

ವಸಂತನ ನಾಡಿಗಳಲ್ಲಿ ರಕ್ತಸಂಚಾರವೇ ನಿಂತು ಹೋಯಿತೋ ಏನೋ. ಅವನ ಕಣ್ಣುಗಳ ಜ್ಯೋತಿಯು ನಂದಿ ಹೋದಂತಾಯಿತು. ಯಾರೋ ಕಿವಿಯಲ್ಲಿ ಸೀಸವನ್ನು ಸುರಿದ ಹಾಗಾಯಿತು. ಅವಮಾನದಿಂದ ತುಂಬಿದ ಆ ಶಬ್ದಗಳಿಂದ ಅವನ ಹೃದಯದ ಮೇಲೆ ವಜ್ರಾಘಾತವಾದಂತಾಯಿತು.

ಒಂದು ಕ್ಷಣದ ಮೇಲೆ ಅವನು ಚೇತನಗೊಂಡನು. ಅವನ ಆತ್ಮಾಭಿಮಾನವು ಜಾಗೃತವಾಯಿತು. ಈ ಅಸಹನೀಯ ಆಘಾತದ ನಂತರ, ಅವನಿಗೆ ತಂದೆಯ ಆಶ್ರಯದಲ್ಲಿರುವುದು ಅಸಂಭವವಾಯಿತು

ಅಷ್ಟರಲ್ಲಿ ತಾಯಿಯು ಊಟಕ್ಕೆ ಕರೆದಳು. ವಸಂತನು ತಲೆ ತಗ್ಗಿಸಿ ಒಳಕ್ಕೆ ಹೋದನು. ತಾಯಿಯು ತಟ್ಟೆಯಲ್ಲಿ ತಿಂಡಿಯನ್ನು ತಂದು "ಅವರದು ಯಾವಾಗಲೂ ಹೀಗೆ ಬಗುಳ್ತಾ ಇರೋದೇನೇ ಸ್ವಭಾವ. ವಯಸ್ಸಾದಂತೆಲ್ಲ. ಸಿಟ್ಟೂ ಹೆಚ್ಚುತ್ತಾ ಹೋಗುತ್ತದೆ" ಎಂದಳು. ಪುನಃ ಅವನು ತಿನ್ನುತ್ತಾ ಹೋದಂತೆಲ್ಲ ಮತ್ತಷ್ಟು ಮಿಠಾಯಿಯನ್ನು ತಂದು "ಅದು ಬೈಗುಳವಲ್ಲ ಮಗು, ಆಶೀರ್ವಾದವೆಂದು ತಿಳಿ. ನಿನಗೆ ತಹಸೀಲ್‌ದಾರ್ ಪದವಿಯನ್ನು ಕೊಡುವುದಾಗಿ

ಸಾಹೇಬರು ಹೇಳಿರುವರಂತೆ” ಎಂದಳು.

ವಸಂತನು ಮಿಠಾಯಿಯನ್ನು ಸುಮ್ಮನೆ ವಿಷವನ್ನು ನುಂಗಿದಂತೆ ನುಂಗಿದನು. ಮಾತೆಯ ಮೃದುಳ ಸ್ನೇಹದ ಬಂಧನವಿಲ್ಲದೆ ಹೋಗಿದ್ದರೆ ಅವನು ಆಕ್ಷಣ ಮನೆಬಿಟ್ಟು ಹೊರಟು ಹೋಗಿಬಿಡುತ್ತಿದ್ದನು. ಆದರೂ ಆ ಕಿಡಿಯು ಒಳಗೊಳಗೇ ತನ್ನ ಕೆಲಸ ಮಾಡುತ್ತಿತ್ತು.

— ೩ —

ವೈಸ್ರಾಯರ ಆಗಮನದ ಸಿದ್ಧತೆಗಳಾಗುತ್ತಿವೆ. ಅಧಿಕಾರಿಗಳು ಅನ್ನ, ನಿದ್ರೆಯನ್ನು ಬಿಟ್ಟು ಕೆಲಸ ಮಾಡುತ್ತಿದ್ದಾರೆ. ನಗರವಾಸಿಗಳ ಪೈಕಿ ಕೆಲವರು ಕಾಂಗ್ರೆಸ್ ಪರವಾಗಿಯೂ, ಮತ್ತೆ ಕೆಲವರು ಸರ್ಕಾರದ ಪರವಾಗಿಯೂ ಇದ್ದರು.

ವೈಸ್ರಾಯರ ಸ್ಪೆಷಲ್ ಗಾಡಿಯು ಸ್ಟೇಷನ್ನಿಗೆ ಬಂದಿತು. ಸೈನ್ಯವು ಸ್ವಾಗತಿಸಿತು. ಮತ್ತೊಂದು ಕಡೆ “ಇನ್‌ಕಿಲಾಬ್” ಘೋಷಣೆ ನಡೆಯಿತು. ಒಳಗಡೆ ಸ್ವಾರ್ಥ ಭಕ್ತರು ನಮಸ್ಕರಿಸುತ್ತಿದ್ದರೆ, ಹೊರಗಡೆ ಸ್ವಾತಂತ್ರ್ಯದ ಪೂಜಾರಿಗಳು ಸ್ವಾತಂತ್ರ್ಯ ಗೀತೆಯನ್ನು ಹಾಡುತ್ತಿದ್ದರು. ಕೆಲವರು ಕರಿ ಧ್ವಜಗಳನ್ನು ಹಿಡಿದು ಹೋಗುತ್ತಿದ್ದರು. ದಫೇದಾರರು ಜಾಲಿಂಸಿಂಹರ ಬಳಿ ಬಂದು ಅವರನ್ನು ಏನು ಮಾಡಬೇಕೆಂದು ಕೇಳಿದರು. ಸರಿ, ದಫೇದಾರ, ಕೊತ್ವಾಲ, ಇನ್‌ಸ್ಪೆಕ್ಟರ್ ಎಲ್ಲರೂ ಚರ್ಚಿಸಿ, ಕಪ್ಪು ಧ್ವಜದವರ ಮೇಲೆ ಕುದುರೆಗಳನ್ನು ಬಿಟ್ಟು, ಲಾಠಿ ಪ್ರಯೋಗ ಮಾಡುವುದೆಂದು ನಿರ್ಧರಿಸಿದರು.

— ೪ —

ಜಾಲಿಂಸಿಂಹನು ಮನೆಗೆ ಬಂದಾಗ ರಾತ್ರಿ ಎರಡು ಗಂಟೆಯಾಗಿತ್ತು. ಪತ್ನಿಯು ಇನ್ನೂ ಎಚ್ಚರವಾಗೇ ಇದ್ದಳು. “ಸಾಕಪ್ಪಾ ಸಾಕು, ಅಧಿಕಾರಿಗಳನ್ನು ಸಂತುಷ್ಟಗೊಳಿಸುವುದರಲ್ಲಿ ಸಾಕಾಗಿ ಹೋಯಿತು” ಎಂದ ಜಾಲಿಸಿಂಹ ಬಂದವನೆ.

“ನಿಮ್ಮ ಹೆಸರು ನಗರದಲ್ಲೆಲ್ಲಾ ಅಮರವಾಯಿತಲ್ಲ ಯಾರೂ ನಿಮ್ಮನ್ನು ಮರೆಯುವಂತಿಲ್ಲ” ಎಂದಳು ರಾಧೆ.

ಆದರೆ ಅವನಿಗೆ ಪತ್ನಿಯು ಹೇಳಿದ್ದು ಕೇಳಿಸಲೇ ಇಲ್ಲ. ತನ್ನದನ್ನೇ

ಹೊಗಳಿಕೊಳ್ಳುತ್ತಾ "ಬೆಳಕಿನ ಇಂತಹ ಉತ್ತಮ ವ್ಯವಸ್ಥೆಯು ನನ್ನಿಂದಲೇ ಆದುದು. ಬಾಣ ಬಿರಸುಗಳನ್ನು ನೋಡಿ ಜನರು ಅತ್ಯಂತ ಸಂತೋಷ ಪಟ್ಟರು. ಡಿಪ್ಯುಟಿ ಕಮೀಶನರು ನಮ್ಮ ಮಗನಿಗೆ ಖಂಡಿತ ಕೆಲಸ ಕೊಡುವದಾಗಿ ವಚನವಿತ್ತಿದ್ದಾರೆ" ಎಂದ.

ರಾಧೆ—ಸರಿ, ಇನ್ನೇನು ಬೇಕು? ಇಹಪರಗಳೆರಡೂ ಸಿಕ್ಕಂತೆಯೇ. ಭಂಗಾರದ ಅರಮನೆ ಕಟ್ಟಿಸಿಬಿಡಿ. ಆದರೆ ನಮ್ಮ ಮಗ ಮಾತ್ರ ಎಂದಿಗೂ ಇನ್ನೊಬ್ಬರ ಗುಲಾಮಗಿರಿಯಲ್ಲಿರಲಾರ—ಹೊಟ್ಟೆಗಿಲ್ಲದೆ ಸತ್ತರೂ ಸರಿ!

ಜಾಲಿಂಸಿಂಹ—(ನಿರಾಶನಾಗಿ) ನಿನ್ನಂತಹ ಗುರು ಇದ್ದರೆ ಇನ್ನೇನು ಹೇಳು! ಗುದ್ದಲಿ ತಕೊಂಡು ಕೆಲಸ ಮಾಡಲಿ, ಯಾರಿಗೇನಂತೆ. ನನ್ನ ಕೆಲಸ ನಾನು ಮಾಡಿದೆ; ಇನ್ನು ಅವನ ಅದೃಷ್ಟದಲ್ಲಿದ್ದಂತಾಗಲಿ. ಅವನೇನು ಮಲಗಿದ್ದಾನೋ?

ರಾಧೆ— ಅವನಿನ್ನೂ ಮನೆಗೇ ಬಂದಿಲ್ಲಾಂದ್ರೇ. ಅವನೂ ಏನೋ ಮಾಡಿರಬೇಕು. ನಾನಾತ್ತನೇ ಮನೆಯ ಸೇವಕಿ, ಯಾರು ಯಾವಾಗ ಬಂದ್ರೂ ಸೇವೆ ಮಾಡೋಕೆ!

ಜಾಲಿಂ—ನಾನೇನು ಹೇಳಿದ್ನೇನು, ಎಚ್ಚರವಾಗಿರೂ ಅಂತ ಯಾರುಪಕಾರಕ್ಕೋ! ಹಗಲೆಲ್ಲ ವಿಶ್ರಮಿಸಿಕೊಂಡಿದ್ದೀಯೆ, ನಂಗಾದ್ರೋ ಅಡಿಕೆಲೆ ಹಾಕಿ ಕೊಳ್ಳೋಕೂ ಸಮಯ ದೊರೆಯಲಿಲ್ಲ. ಊಟಕ್ಕೇಳ್ತೀರಾಂತ ಕೇಳ್ತಾಳೇನೋ ಅಂತ ಇದ್ದರೆ, ಏನೇನೋ ತೆಗೆದ್ಬು ಪುರಾಣಾನ.

ರಾಧೆ—ಮಗು ಇನ್ನೂ ಬರಲೇ ಇಲ್ಲ. ನನಗೇಕೋ ಹೆದರಿಕೆಯಾಗುತ್ತಿದೆ. ಅವನಿಗೆ ಆಟ ಆಡೋ ಅಭ್ಯಾಸ ಇಲ್ಲ. ಎಲ್ಲ ಮುಗಿದ ಮೇಲೂ ಇನ್ನೂ ಬರ್ಲೇ ಇಲ್ಲವಲ್ಲ ಇವತ್ತು ನಗರದಲ್ಲಿ ಎಷ್ಟು ಹಾಹಾಕಾರವುಂಟಾಗಿವೆಯೋ ನಮಗೇನು ಗೊತ್ತು? ಯಾರೋ ಒಂದು ಹುಡುಗ ಕುದುರೆಯಿಂದ ತುಳಿಯಲ್ಪಟ್ಟನೆಂದು ಮಾತನಾಡುತ್ತಿದ್ದರು.

ಜಾಲಿಂ—ಬೆಳಗಾಗಲಿ, ನಿಲ್ಲು, ಎಲ್ಲಿದ್ರೂ ಹುಡುಕಿ ಸರಿಯಾಗಿ ಬುದ್ಧಿ ಕಲಿಸುತ್ತೇನೆ ಅವನಿಗೆ!

ರಾಧೆ—ಇನ್ನೇನು ನಮಗೆ ಕೆಲಸ. ಎಷ್ಟು ಮನೆಯಲ್ಲಿ ಇವತ್ತು ಗೋಳೋ ಏನೋ! ನಾನೇ ನೋಡಿದೆ, ಈ ದಾರಿಯಲ್ಲೇ ೧೦-೨೦ ಶವಗಳು ಹೋದುದನ್ನು. ಕುದುರೆ ಕಾಲಿಗೆ ಸಿಕ್ಕಿ ಸತ್ತವರು ಕೆಲವರು, ಲಾಠಿಯಿಂದ ಸತ್ತವರು ಕೆಲವರು, ಗಾಯಗೊಂಡವರ ಸಂಖ್ಯೆಗಂತೂ ಲೆಕ್ಕವೇ ಇಲ್ಲ. ಎಲ್ಲ ನಿಮ್ಮ ಹೆಸರಿನಲ್ಲೇ ರೋದಿಸುತ್ತಿದ್ದರು. ಜನರನ್ನು ಕೊಲ್ಲುವ ಜವಾಬ್ದಾರಿಯನ್ನು ಹೊತ್ತಿರುವ ನೀವು, ಅವರನ್ನು ಸುಡುವ ಕೆಲಸವನ್ನೂ ವಹಿಸಿಕೊಳ್ಳಬೇಕಾಗಿತ್ತು! ಹಾಳು ಕೆಲಸಕ್ಕೆ ರಾಜಿನಾಮೆಯನ್ನಾದರೂ ಕೊಡಬಾರದೇ? ಈ ಹಾಳು ಅನ್ಯಾಯದ ಅನ್ನ ತಿನ್ನೋದಕ್ಕಿಂತ ಹೊಟ್ಟೆಗಿಲ್ಲದೆ ಸಾಯೋದೇ ಒಳ್ಳೇದು ಅಂತ ತೋರುತ್ತೆ ನನಗೆ.

ಜಾಲಿಂ—ತಿನ್ನದಿದ್ರೆ ಬಿಡು ನನಗೇನಂತೆ? ಬೈಯೋರು ಸರ್ಕಾರವನ್ನು ಬೈಯುವರೇ ವಿನಹಾ ನನ್ನನ್ನೇನೂ ಅಲ್ಲ. ಯಾರು ರಕ್ತವನ್ನು ಸುರಿಸಿ ದೇಶವನ್ನು ಗೆದ್ದಿರುವರೋ, ಅವರು ರಕ್ತವನ್ನು ಹರಿಸದೆ ದೇಶವನ್ನು ಬಿಟ್ಟುಕೊಡುವರೇ? ಪ್ರಪಂಚದ ಆಟವೇ ಹೀಗೆ.

ಯಾರೋ ಹೊರಗಿಂದ— "ಸ್ವಾಮಿ, ದಾರೋಗಾಜಿ, ಬೇಗ ಬನ್ನಿ, ಬೇಗ ಬನ್ನಿ" ಎಂದು ಕೂಗಿದನು. ಜಾಲಿಂಸಿಂಹನು ಹೊರಗೆ ಹೋಗಿ ನೋಡಲು, ನಾಲ್ಕು ಮಂದಿ ಪೋಲೀಸಿನವರು ಒಂದು ಶವವನ್ನು ತೆಗೆದುಕೊಂಡು ಹೋಗುತ್ತಿದ್ದಾರೆ. ಇವನ ಎದೆ ಕಂಪಿಸಿತು. "ಯಾರದು?" ಎಂದು ಕೇಳಿದ. ಒಬ್ಬನು ಅಳುತ್ತಾ "ಹಜೂರ್! ತಮ್ಮ ಮಗನೇ! ಒಬ್ಬ ಕಾಂಗ್ರೆಸ್ ಸ್ವಯಂಸೇವಕನು ಇವರನ್ನೂ ಆಸ್ಪತ್ರೆಯಿಂದ ತಂದು ಸ್ಟೇಷನ್ನಿನಲ್ಲಿಟ್ಟು ಹೋದನು" ಎಂದನು.

ಜಾಲಿಂಸಿಂಹನು ಹುಚ್ಚನಂತೆ ಶವದ ಬಳಿ ಹೋದನು. ಎರಡು ಕೈಗಳಿಂದಲೂ ತಲೆ ಜಜ್ಜಿಕೊಳ್ಳುತ್ತಾ, "ಅಯ್ಯೋ ಮಗನೇ!" ಎಂದು ಅಳಲಾರಂಭಿಸಿದನು.

ರಾಧೆಯು ಒಳಗಿನಿಂದ ಬಂದು ಮಗನ ಶವದ ಮೇಲೆ ಬಿದ್ದಳು ಸ್ವಲ್ಪ ಹೊತ್ತಿನ ನಂತರ ಎದ್ದು ಶವವನ್ನು ಅಪ್ಪಿಕೊಂಡು "ಮಗನೇ, ಮಗನೇ, ನನ್ನನ್ನು ಬಿಟ್ಟು ಹೊರಟು ಹೋದೆಯಾ! ನನ್ನೊಡನೆಯೇ

ಇರುವೆನೆಂದು ಹೇಳುತ್ತಿದ್ದೆಯಲ್ಲ? ಇಷ್ಟು ಬೇಗ ಮರೆತೆಯಾ...."! ಎಂದು ಅಳಹತ್ತಿದಳು.

ಅಳುವುದನ್ನು ಕೇಳಿ ಅನೇಕರು ಸೇರಿದರು. ಎಲ್ಲರೂ ಕಣ್ಣೀರಿಡುತ್ತಿದ್ದರು. ಜಾಲಿಂಸಿಂಹನ ಬಗ್ಗೆ ಜನರಿಗೆ ಸಹಾನುಭೂತಿ ಇರಲಿಲ್ಲ. ವಸಂತನ ಅಕಾಲ ಮರಣಕ್ಕೆ ವ್ಯಸನಪಡುತ್ತಿದ್ದರು. ಬಹಳ ಯೋಗ್ಯನಾದ ಬಾಲಕ! ರಾಧೆಯು ಪತಿಯೊಡನೆ ಹೇಳಿದಳು: "ಎಲಾ ಪಾಪಿಯೇ! ಸುಮ್ಮನಿರು ಅಳುವೆ ಏಕೆ? ಇದು ನಿನ್ನ ಕರ್ಮದ ಫಲವೇ ಅಲ್ಲವೇ? ಈಗ ನಿನಗೇ ತಿಳಿಯುವುದು—ಮಗನ ಮರಣದ ದುಃಖವು ಹೇಗಿರುವುದೆಂಬುದು. ನೀನು ನೂರಾರು ಮನೆಗಳನ್ನು ಹಾಳು ಮಾಡಿದೆ, ಮತ್ತೇಕೆ ಅಳುತ್ತಿರುವೆ? ಈ ರೀತಿ ಇನ್ನೆಷ್ಟು ಮನೆಯವರು ರೋದಿಸುತ್ತಿರುವರೋ ಏನೋ? ಭಗವಂತನು ಎಂತಹ ನ್ಯಾಯಪಕ್ಷಪಾತಿಯು! ದೇವರೇ, ಒಳ್ಳೇದನ್ನೇ ಮಾಡಿದೆ! ತತ್ಕಾಲದಲ್ಲೇ ಫಲವನ್ನು ಕೊಟ್ಟೆ!"

ಕೊತ್ವಾಲ, ಡೆಪ್ಯುಟಿ ಸೂಪರಿಂಟೆಂಡೆಂಟ್ ಇನ್‌ಸ್ಪೆಕ್ಟರ್ ಎಲ್ಲರೂ ಬಂದು ಸಮಾಧಾನಪಡಿಸುತ್ತಿದ್ದರು. ರಾಧೆಯು ಎದ್ದು ಒಳಗೆ ಹೋದಳು.

ಕೊತ್ವಾಲ — ನಾನು ಬರುತ್ತಿದ್ದಾಗ, ಇವರು ಗುಂಪಿನಲ್ಲಿ ಬಂದುಬಿಟ್ಟರು. ಒಂದೇ ಗಳಿಗೆಯಲ್ಲಿ ಕುದುರೆಯ ಕಾಲಿಗೆ ಸಿಕ್ಕಿಬಿಟ್ಟರು!

ಡಿ. ಎಸ್. ಪಿ. — ಯುವಕರು ಬಹಳ ಎಚ್ಚರಿಕೆಯಿಂದಿರಬೇಕೂ ಅನ್ನೋದಿದಕ್ಕೇ! ಈ ಸುದ್ದಿಯನ್ನು ಬಹಿರಂಗಪಡಿಸಬಾರದು. ನಾವೆಲ್ಲ ಮನೆಗೆ ಸೇರಿದವರೇ. ಆದರೆ ಇನ್ಸ್‌ಪೆಕ್ಟರ್ ಜನರಲ್‌ರವರಿಗೆ ತಿಳಿದರೆ ಬಹಳ ಕೆಟ್ಟ ಹೆಸರು ಬರುವುದು. ಪೋಲೀಸರೂ ಸೇರಿಕೊಂಡಿದ್ದಾರೆಂದು ಜನರು ತಿಳಿದುಕೊಳ್ಳುವರು.

ಇಷ್ಟರಲ್ಲಿ ಜಾಲಿಂಸಿಂಹನ ಮನೆಯಿಂದ ವಿಪರೀತಹೊಗೆ ಹೊರಟಿತು. ಜನರೆಲ್ಲರೂ ವಿಸ್ಮಿತರಾಗಿ ಆ ಕಡೆ ನೋಡಿದರು ಜಾಲಿಂಸಿಂಹ ಒಳಗೆ ಓಡಿದ. ಕೋಣೆ ಮುಚ್ಚಲ್ಪಟ್ಟಿತ್ತು ಅದರಿಂದಲೇ ಹೊಗೆ ಹೊರಗೆ ಬರುತ್ತಿತ್ತು. ಸಂದೇಹ ಹೆಚ್ಚಿತು. ಬಾಗಿಲನ್ನು ತಳ್ಳಲು, ಅದು ಒಳಗಡೆಯಿಂದ ಭದ್ರವಾಗಿ ಹಾಕಲ್ಪಟ್ಟಿತ್ತು. ಜನರಲ್ಲಿ ಹಾಹಾಕಾರ

ಹೆಚ್ಚಿ, ಕದವನ್ನು ಒಡೆದರು ಬಾಗಿಲನ್ನು ತೆರೆದೊಡನೆಯೇ, ಒಳಗಿಂದ ಪ್ರಚಂಡ ಜ್ವಾಲೆಯು ಹೊರಗೆ ಪ್ರವೇಶಿಸಿತು. ಕೋಣೆಯ ಬಾಗಿಲ ಬಳಿ ಹೋಗುವುದೇ ಕಷ್ಟವಾಯಿತು. ಸೀಮೆ ಎಣ್ಣೆಯ ವಾಸನೆ ಬರುತ್ತಿತ್ತು. ಅರ್ಧ ಗಂಟೆಯ ಮೇಲೆ ಬೆಂಕಿ ಆರಿತು.

ರಾಧಾರಾಣಿಯು ಸುಟ್ಟು ಬೂದಿಯಾಗಿ ಹೋಗಿದ್ದಳು.

---

## ೭ ವರನ ಮೆರವಣಿಗೆ

ರಾಮನಾಥನು ತನ್ನ ಮೊದಲನೆ ಹೆಂಡತಿಯನ್ನು ತ್ಯಜಿಸಿ ಎರಡನೇ ವಿವಾಹವನ್ನು ಮಾಡಿಕೊಳ್ಳಲು ಸಿದ್ಧತೆಗಳನ್ನು ಮಾಡುತ್ತಿದ್ದಾನೆ. ಬಂಧುಬಳಗದವರೆಲ್ಲರೂ ಬಂದಿದ್ದಾರೆ. ವಾದ್ಯಗಳ ನಾದವು ಕೇಳಿ ಬರುತ್ತಿದೆ. ಒಳಗಡೆ ಮಂಗಳ ಗಾನವಾಗುತ್ತಿದೆ. ಮದುವೆಮನೆಯಲ್ಲಿ ಸಂಭ್ರಮವೇ ಸಂಭ್ರಮ. ರಾಮನಾಥನ ತಾಯಿಯು ನವವಧುವಿಗೆಂದು ವಸ್ತ್ರಾಭರಣಗಳನ್ನು ಸಿದ್ಧಪಡಿಸುತ್ತಾ ಆನಂದಪರವಶಳಾಗಿದ್ದಾಳೆ. ಹೊಸ ಸೊಸೆಯು ಬಹಳ ಗುಣವಂತೆಯೆಂದು ಅವಳಿಗೆ ಯಾರೋ ಹೇಳಿದ್ದಾರೆ—ಬಹಳ ಲಜ್ಜಾಶೀಲಳು; ವಿನಯ ಸ್ವಭಾವದವಳು. ಅವಳು ವಿದ್ಯಾವತಿಯಲ್ಲವೆಂದು ಎಲ್ಲರಿಗೂ ಬಹಳ ಸಂತೋಷ ಇದರಿಂದ ಅವಳು ಅತ್ತೆಯ ಸೇವೆಯನ್ನು ಬಹಳ ಉತ್ತಮ ರೀತಿಯಿಂದ ಮಾಡುವಳೆಂದೂ, ಮರ್ಯಾದೆಯಿಂದ ಇದ್ದು, ಎಲ್ಲರ ಆಜ್ಞೆಯನ್ನೂ ಪಾಲಿಸುವಳೆಂದೂ, ಗೃಹ ಕಾರ್ಯಗಳನ್ನು ಕುಶಲತೆಯಿಂದ ಮಾಡಿ, ಮನೆಯನ್ನು ಸ್ವರ್ಗಸಮಾನವಾಗಿ ಮಾಡುವಳೆಂದೂ ಎಲ್ಲರೂ ಭಾವಿಸಿದ್ದಾರೆ.

ರಾಮನಾಥನ ತಂದೆಯು ಬಂದು ಗಾಡಿಗೆ ಹೊತ್ತಾಯಿತೆಂದೂ, ಎಲ್ಲರೂ ಬೇಗ ಹೊರಡಬೇಕೆಂದೂ ಕೂಗಾಡುತ್ತಿದ್ದಾನೆ. ವರನ ಶೃಂಗಾರಕ್ಕೆ ಪ್ರಾರಂಭವಾಯಿತು. ಹೊಸ ಉಡುಪು, ಪಾದರಕ್ಷೆಗಳು, ಹಣೆಗೆ ತಿಲಕ, ಎಲ್ಲಾ ಆಯಿತು. 45 ವರ್ಷ ವಯಸ್ಸು, 4—5 ಹಲ್ಲುಗಳು ಬಿದ್ದಿವೆ, ಮುಖದಲ್ಲಿ ಸುಕ್ಕು ಕಾಣುತ್ತಿದೆ.

— ೨ —

ಅತ್ತ ಕಡೆ ರಾಮೇಶ್ವರಿಯ ತಂದೆಗೂ ಈ ಸುದ್ದಿ ತಿಳಿಯಿತು. ನಾವು ನೀಚ ಜಾತಿಯವರಿಗಿಂತಲೂ ನೀಚರು; ಅವರಿಗೆ ದೇವರ ಭಯವಾದರೂ ಇರುತ್ತದೆ, ನಮಗೆ ಅದೂ ಇಲ್ಲ! ಅಯ್ಯೋ! ರಾಮೇಶ್ವರಿಯು ಕೇಳಿದರೆ ಆವಳ ಗತಿಯೇನಾಗುವುದೋ? ಮೊದಲೇ ತಿಳಿದಿದ್ದರೆ ಏನಾದರೂ ಮಾಡಬಹುದಾಗಿತ್ತು. ಈಗ ಎಲ್ಲ ಮೀರಿತು. ರಾಮೇಶ್ವರಿಯ ವಿವಾಹವಾಗಿ 15 ವರ್ಷವಾಗಿತ್ತು. ಏನೂ ಸುಖ ದೊರೆಯಲಿಲ್ಲ. ವಿಧವೆಯರಂತೆ ಕಾಲ ಹಾಕುತ್ತಿದ್ದಳು. ಈ ಹೊಸ ಸುದ್ದಿಯು, ಹೊಸ ಘಾಯವು, ಅವಳಿಗೆ ಬಹಳ ಸಂಕಟವನ್ನುಂಟುಮಾಡಿತು.

ರಾಮೇಶ್ವರಿಯು ಮಾನಕ್ಕಾಗಿ ಪ್ರಾಣವನ್ನಾದರೂ ಕೊಡತಕ್ಕ ಸ್ತ್ರೀಯು. ಒಂದು ಸಾರಿ ಒಂದು ನಿಶ್ಚಯಕ್ಕೆ ಬಂದರೆ ಪುನಃ ಅದನ್ನು ಎಂದಿಗೂ ಬದಲಾಯಿಸತಕ್ಕವಳಲ್ಲ. ಬಹಳ ಸ್ವಾಭಿಮಾನಿ. ಸ್ತ್ರೀಯರು ಹುಟ್ಟಿರುವುದು ಪುರುಷರ ಗುಲಾಮರಾಗಿರುವುದಕ್ಕಾಗಿಯೇ? ಆವಳ ಅಭಿಮಾನೀ ಹೃದಯವು ಇದನ್ನು ಸಹಿಸಲಿಲ್ಲ. ಗುಲಾಮಗಿರಿಯ ಕಲ್ಪನೆಯೇ ಆವಳಿಗೆ ಅಸಹ್ಯವಾಯಿತು. ತನ್ನ ಪತಿಯು ಪುನರ್ವಿವಾಹ ಮಾಡಿಕೊಳ್ಳುವ ಸುದ್ದಿಯನ್ನು ಕೇಳಿದೊಡನೆಯೇ ರಾಮೇಶ್ವರಿಯು ತಾನು ಜೀವಿಸಿರುವ ವರೆಗೆ ಆ ಮದುವೆಯು ನಡೆಯಲಾಗದು, ಖಂಡಿತ ನಡೆಯಲೇ ಕೂಡದು! ಎಂದು ಸಂಕಲ್ಪಿಸಿದ್ದಳು! 'ನನ್ನ ಪತಿಯು ನವವಧುವಿನೊಡನೆ ಸುಖದಿಂದಿರಲು ನಾನೆಂದಿಗೂ ಅವಕಾಶ ಕೊಡುವುದಿಲ್ಲ. ನಾನು ಹಗಲು ರಾತ್ರಿ ಕಣ್ಣೀರಿನ ಕಾಲುವೆಯನ್ನು ಹರಿಸುತ್ತ ಕಾಲ ತಳ್ಳುತ್ತಿರುವಂತೆ, ನೀನೂ ದುಃಖದಲ್ಲೇ ಇರಬೇಕು.' ಅವಳು ಮನೆಯಲ್ಲಿ ಯಾರಿಗೂ ಏನನ್ನೂ ಹೇಳದೆ. ಮೆಲ್ಲಗೆ ಮನೆಯಿಂದ ಹೊರಟು, ಒಂದು ಟಾಂಗಾ ಮಾಡಿಕೊಂಡು ನೇರವಾಗಿ ತನ್ನ ಅತ್ತೆ ಮಾವನ ಮನೆಗೆ ಹೊರಟಳು. ದಾರಿಯಲ್ಲಿ "ಈ ದಿನ ಏನಾದರೂ ಅದ್ಭುತ ಸಾಹಸವನ್ನು ತೋರಿಸಿಯೇ ಬಿಡುವೆನು, ಭಾರತದಲ್ಲಿ ಒಂದು ಆದರ್ಶಕ್ಕಾಗಿ ಪ್ರಾಣವನ್ನು ಸಹ ಬಿಡಲು ಸಿದ್ಧರಿರುವ ಸ್ತ್ರೀಯರಿಗೇನೇನೂ ಕೊರತೆ ಇಲ್ಲ ಎಂಬುದನ್ನು ಜಗತ್ತಿಗೆ ತೋರಿಸುವೆನು!'

ಎಂದು ಆಲೋಚಿಸುತ್ತಾ ಇದ್ದಳು. ಪುರುಷರಂತೆ ಸ್ತ್ರೀಯರು ಭೋಗ ವಿಲಾಸಕ್ಕಾಗಿಯೇ ಜೀವಿಸುವುದಿಲ್ಲ. ಅವರು ಜೀವಿಸುವುದು ತಮ್ಮ ಧರ್ಮವನ್ನು ಪಾಲಿಸುವುದಕ್ಕಾಗಿ! ಅವಳ ಸ್ಥಿತಿಯು ಹುಚ್ಚರಂತಾಯಿತು. ತನಗೆ ತಾನೇ ನಗುವಳು, ತನಗೆ ತಾನೇ ಅಳುವಳು, ಮತ್ತು ಏನೇನೋ ಮಾತಾಡಿಕೊಳ್ಳುತ್ತಿದ್ದಳು.

— ೩ —

ವರನ ಮೆರವಣಿಗೆಯು ಸಿದ್ಧವಾಗಿತ್ತು. ವರನು ವಸ್ತ್ರ ಭೂಷಣ ಗಳಿಂದಲಂಕೃತನಾಗಿ ಮೋಟಾರಿನಲ್ಲಿ ಕುಳಿತಿದ್ದನು. ವಾದ್ಯಗಳು ಮೊಳಗುತ್ತಿದ್ದುವು. ರಾಮೇಶ್ವರಿಗೆ ಆತ್ಮಹತ್ಯೆ ಮಾಡಿಕೊಳ್ಳಲೇ ಎಂಬ ಯೋಚನೆಯುಂಟಾಯಿತು. ನನ್ನನ್ನು ಕೇಳುವವರು ಯಾರೂ ಇಲ್ಲ ದಿರುವಾಗ ನಾನು ಜೀವಿಸಿದ್ದು ಫಲವೇನು? ಪುನಃ ಅವರೆದುರಿನಲ್ಲಿಯೇ ನಾನೂ ಪುನರ್ವಿವಾಹವನ್ನೇಕೆ ಮಾಡಿಕೊಳ್ಳಬಾರದೆಂದು ಒಮ್ಮೆ ಯೋಚಿಸುವಳು. ಇಲ್ಲ, ಇಲ್ಲ ನಾನು ಸ್ತ್ರೀ ಜಾತಿಗೆ ಕಲಂಕಪ್ರಾಯ ಳಾಗಲಾರೆನು! ನನ್ನ ಕುಲ ಮರ್ಯಾದೆಗೆ ಭಂಗ ತರಲಾರೆನು. ಆದರೆ ಈ ವರನ ಮೆರವಣಿಗೆಗೆ ಮಾತ್ರ ಅವಕಾಶ ಕೊಡಲಾರೆನು ನನ್ನ ಪ್ರಾಣ ಹೋದರೂ ಸರಿ!

ಮೋಟಾರು ಹಾರ್ನ್ ಮಾಡಿ ಇನ್ನೇನು ಹೊರಡುವ ಸಮಯ; ರಾಮೇಶ್ವರಿಯು ಅದರ ಮುಂದೆ ಹೋಗಿ ನಿಂತಳು. ರಾಮನಾಥನು ಅವಳನ್ನು ಕಂಡು "ಅಯ್ಯೋ, ಈ ಹಾಳು ಪ್ರಾರಬ್ಧ ಇಲ್ಲಿಗೇಕೆ ಬಂತಪ್ಪಾ! ಯಾರು ನಿನ್ನನ್ನು ಇಲ್ಲಿ ಕರೆಸಿದವರು?" ಎಂದನು

"ಯಾರೂ ನನ್ನನ್ನು ಕರೆಯಿಸುವ ಆಗತ್ಯವಿಲ್ಲ"—ರಾಮೇಶ್ವರಿ ಯೆಂದಳು.

"ತೊಲಗು ಇಲ್ಲಿಂದ. ನನಗೆ ನಿನ್ನ ಮುಖ ತೋರಿಸಬೇಡ."

"ನೀವು ಮದುವೆಗೆ ಹೊರಡಲಾರಿರಿ."

"ನೀನು ನನ್ನನ್ನು ತಡೆಯಬಲ್ಲೆಯಾ?"

"ನಿಮ್ಮನ್ನು ಇಲ್ಲೇ ತಡೆಯುವೆನು ಅಥವಾ ಪ್ರಾಣವನ್ನಾದರೂ ಬಿಡುವೆನು."

"ಪ್ರಾಣ ಕಳೆದುಕೊಳ್ಳಬೇಕೂಂತ ಆಸೆ ಇದ್ರೆ ಬಾವಿಗೆ ಬಿದ್ದು ಸಾಯಿ ಹೋಗು ಬೇಡಾಂತಿದ್ರೆ, ಇನ್ನೊಬ್ಬನನ್ನು ಮದುವೆ ಆಗು ಹೋಗು. ಅಥವಾ ಯಾವನನ್ನಾದರೂ ಕಟ್ಟಿಕೊಂಡು ಓಡಿ ಹೋಗು, ನಾನು ಬೇಡಾನ್ನೋದಿಲ್ಲ ದೇವರಾಣೆಗೂ ಮಾತಾಡೋದಿಲ್ಲ. ನನ್ನ ಜೀವನವೇ ನಿನ್ನಿಂದ ಹಾಳಾಗಿ ಹೋಯ್ತು. ಇನ್ನೂ ಏನ್ಮಾಡ ಬೇಕೂಂತಿದ್ದೀಯೆ? ನಾನು ಹೇಳಿದಂತೆ ದಾರಿ ಬಿಟ್ಟರೆ ಸರಿ; ಇಲ್ಲದಿದ್ರೆ ನಿನ್ನ ಮೇಲೆ ಮೋಟಾರನ್ನು ನಡೆಸಿಬಿಡುವೆನು"

ಈ ಬೆದರಿಕೆಯಿಂದ ರಾಮೇಶ್ವರಿಯು ಮತ್ತಷ್ಟು ಉತ್ತೇಜಿತ ಳಾದಳು. "ನಾನೂ ಅದನ್ನೇ ಕೇಳೋದು. ನನ್ನನ್ನು ತುಳಿದು ಮುಂದೆ ಹೋಗಿರಿ" ಎಂದಳು.

"ನಿನ್ನ ಮುಖ ನೋಡೋದೂ ಪಾಪ".

"ನಾನು ನನ್ನ ಮುಖವನ್ನು ನಿಮಗೆ ತೋರಿಸೋಕಾಗಿ ಬಂದಿಲ್ಲ".

"ಮತ್ಯಾಕೆ ಇಲ್ಲಿ ನಿಂತಿದ್ದಿಯೇ ಎಲ್ಲಾದ್ರೂ ತೊಲಗುವುದನ್ನು ಬಿಟ್ಟು!"

"ಸ್ವಲ್ಪ ನಾಲಗೆ ಹಿಡಿದು ಮಾತನಾಡಿ. ಹುಷಾರ್! ನಾನು ಏನು ಬೇಕಾದರೂ ಸಹಿಸಬಲ್ಲೆನು. ಆದರೆ ಅವಮಾನವನ್ನು ಮಾತ್ರ ಸಹಿಸ ಲಾರೆನು"

"ಪಾಪ, ಬಹಳ ಸತ್ಯವಂತೆ!"

"ತಾನು ಸ್ವತಃ ಭ್ರಷ್ಟನಾಗಿರುವವನು ಇತರರನ್ನೂ ಹಾಗೇ ತಿಳಿದುಕೊಳ್ಳುವನು."

"ದೂರ ಸರಿಯುವಿಯೋ ಇಲ್ಲವೋ?"

"ಇಲ್ಲ".

"ಒಳ್ಳೆ ಮಾತಿನಲ್ಲಿ ಹೋದರೆ ಸರಿ; ಇಲ್ಲವಾದರೆ, ಇಲ್ಲೇ ಧ್ವಂಸ ಮಾಡಿಬಿಟ್ಟೇನು."

"ಏನುಬೇಕಾದರೂ ಮಾಡಬಹುದು. ಸುಮ್ಮನೇ ಏಕೆ ಬಗುಳು ತ್ತಿರುವಿರಿ? ನೂಕಿ ನೋಡೋಣ. ನಾನು ಬದುಕಿರುವ ವರೆಗೆ ನಿಮಗೆ ಸುಖ ದೊರೆಯಲಾರದೆಂದು ಪ್ರತಿಜ್ಞೆ ಮಾಡಿದ್ದೇನೆ."

"ಯಾರನ್ನಾದರೂ ಮದುವೆಯಾಗು ಅಂತ ಹೇಳಿದೆನಲ್ಲ, ಆಗಲೇ."

"ನನ್ನ ಪುನರ್ವಿವಾಹವು ಭಗವಂತನೆದುರಿನಲ್ಲೇ ನಡೆಯುವುದು. ಆದರೆ ಬದುಕಿರುವ ವರೆಗೆ ಅತ್ಯಾಚಾರವನ್ನು ಮಾತ್ರ ಸಹಿಸಲಾರೆನು"

ರಾಮನಾಥನಿಗೆ ಇನ್ನು ಸಹಿಸಲಾಗಲಿಲ್ಲ. ಅವನು "ಕಾರನ್ನು ಇವಳ ಮೇಲೆ ಬಿಡೋ! ನೋಡೋಣ, ಏನಾದ್ರೂ ಆಗ್ಲಿ, ನಾನು ನೋಡ್ಕೊಳ್ತೀನಿ" ಎಂದು ಡ್ರೈವರನಿಗೆ ಹೇಳಿದನು.

ಆದರೆ ಡ್ರೈವರನು ಒಪ್ಪಲಿಲ್ಲ. ನೂರಾರು ಮಂದಿ ಪ್ರೇಕ್ಷಕರು ನಿಂತಿದ್ದರು. ಅವನು ಮೋಟಾರನ್ನು ಸ್ತ್ರೀಯೊಬ್ಬಳ ಮೇಲೆ ಬಿಟ್ಟು, ತನ್ನ ಪ್ರಾಣಕ್ಕೆ ತೊಂದರೆಯನ್ನುಂಟುಮಾಡಿಕೊಳ್ಳುವುದಕ್ಕೆ ಇಷ್ಟಪಡಲಿಲ್ಲ. ಜೀವ ಸಹಿತ ಇದ್ದರೆ, ಭಿಕ್ಷೆಬೇಡಿಯಾದರೂ ಜೀವಿಸಬಹುದೆಂದಿದ್ದ ಅವನಿಗೆ ಇಂತಹ ನೌಕರಿ ಬೇಕಾಗಿರಲಿಲ್ಲ. ಅವನು ಕಾರಿನಿಂದ ಇಳಿದು ಹೊರಟು ಹೋದನು.

ರಾಮೇಶ್ವರಿ - ನಿಮ್ಮ ಮೋಟಾರಿಗೆ ನಾನು ಹೆದರುವೆನೆ? ಜಗತ್ತಿನಲ್ಲಿ ಸುಖಪಡಬೇಕೆಂಬ ಆಶೆ ಇರುವವರಿಗೇನೇ ಮರಣ ಭಯವಿರುವುದು. ನಾನಂತೂ ಸಾಯಲು ಸಿದ್ಧಳಾಗಿಯೇ ಬಂದಿದ್ದೇನೆ. ನಾನು ಬದುಕಿದ್ದು ಮಾಡಬೇಕಾದುದಾದರೂ ಏನು? ಇದುವರೆಗೆ ಅತ್ತೂ ಅತ್ತೂ ಸಾಕಾಯಿತು ಇನ್ನೂ ಅಳಲಾರೆ.

ರಾಮನಾಥನಿಗೆ ತಡೆಯಲಾರದಷ್ಟು ಸಿಟ್ಟು ಬಂದಿತು. ಮನುಷ್ಯನ ವಿಚಾರಶಕ್ತಿಯು ನಷ್ಟವಾಯಿತೆಂದರೆ, ಅವನು ಕುರುಡನಾಗಿ ಹೋಗುತ್ತಾನೆ. ಇಷ್ಟು ಜನರೆದುರಿನಲ್ಲಿ ಒಬ್ಬ ಅಬಲೆಯಿಂದ ಆದ ಅವಮಾನವನ್ನು ಅವನು ಹೇಗೆ ತಾನೆ ಸಹಿಸಬಲ್ಲನು? ಹಿಂಸಾತ್ಮಕ ಸಂಕಲ್ಪವನ್ನು ಮಾಡಿ ಅವನು ಹಾರ್ನ್ ಶಬ್ದ ಮಾಡಿದನು. ಮೋಟಾರು ಹೊರಟ ಕೂಡಲೆ, ಪ್ರಾಯಶಃ ರಾಮೇಶ್ವರಿಯು ಪ್ರಾಣದ ಮೋಹದಿಂದ, ದಾರಿಯನ್ನು ಬಿಡಬಹುದೆಂದು ಅವನು ಊಹಿಸಿದ್ದನು. ರಾಮೇಶ್ವರಿಯು ಹೆದರಿದಳು. ಆತ್ಮರಕ್ಷಣೆಯ ಸಹಜ ಭಾವನೆಗೆ ವಶಳಾಗಿ ಅವಳು ಒಂದು ಹೆಜ್ಜೆ ಸರಿದಳು; ಆದರೆ ತಕ್ಷಣವೇ ಧೈರ್ಯಗೊಂಡು ಕಾರಿನ ಮುಂದೆ ಬಂದು ನಿಂತಳು!

ಪುನಃ ಹಾರ್ನ್ ಶಬ್ದವಾಯಿತು! ರಾಮೇಶ್ವರಿಯು ಚಲಿಸಲಿಲ್ಲ; ಕಣ್ಣುಗಳು ಮುಚ್ಚಲ್ಪಟ್ಟಿದ್ದುವು.

ಮೂರನೇ ಸಾರಿ ಹಾರ್ನ್ ಶಬ್ದವಾಗಿ, ಕಾರು ಹೊರಟೇ ಬಿಟ್ಟಿತು ಒಂದು ಚೀತ್ಕಾರ ಧ್ವನಿ ಕೇಳಿಸಿತು! ಕಾರು ಮುಂದಕ್ಕೆ ಹೊರಟೇ ಹೋಯಿತು. ರಾಮೇಶ್ವರಿಯ ಕೋಮಲ ದೇಹವು ನೆಲದ ಮೇಲೆ ನಡುಗುತ್ತ ಬಿದ್ದಿತು!

— ೪ —

ಕಾರು ಒಂದು ಗಜ ಹೋಗುವುದಕ್ಕೆಮೊದಲೇ, ರಾಮನಾಥನು ಕಾರಿನಿಂದಿಳಿದನು. ಅವನ ಮುಖ ಒಂದೇ ಒಂದು ರಕ್ತವೂ ಇಲ್ಲವೆಂಬಷ್ಟು ಹಳದಿ ಬಣ್ಣಕ್ಕೆ ತಿರುಗಿತ್ತು. ದೇಹವೆಲ್ಲ ತೃಣದಂತೆ ಕಂಪಿಸುತ್ತಿತ್ತು. ಪ್ರೇಕ್ಷಕರು ಶವದ ಸುತ್ತ ನರೆದರು. ಅತ್ಯಂತ ರೋಮಾಂಚಕಾರಕವಾದ ದೃಶ್ಯವಾಗಿತ್ತು. ಗುಂಪಿನಲ್ಲಿ ಇದ್ದಕ್ಕಿದ್ದಂತೆ ಹಾಹಾಕಾರವುಂಟಾಗಿ, ಜನರೆಲ್ಲರೂ ರಾಮನಾಥನ ಮೇಲೆ ಬಿದ್ದರು.

ಸಂಘಶಕ್ತಿಯು ಯಾವಾಗಲೂ ತನ್ನ ಎಲ್ಲೆಯನ್ನು ಮೀರಿ ಹೋಗೇ ನಿಲ್ಲುವುದು. ವ್ಯಕ್ತಿಯ ಶಕ್ತಿಯು ಕಲ್ಪನೆಗೆ ಮೀರಿದ ಕೆಲಸವನ್ನೂ ಅದು ಮಾಡುವುದು. ಅದು ಕಾನೂನನ್ನು ಲಕ್ಷಿಸುವುದೇ ಇಲ್ಲ. ಅತ್ಯಾಚಾರಕ್ಕೆ ತಕ್ಷಣ ಶಿಕ್ಷೆಯನ್ನೂ ವಿಧಿಸಿ ಬಿಡುವುದು. ಕಾನೂನಿನಲ್ಲಿ, ಎಷ್ಟೋ ಮಂದಿ ಅಪರಾಧಿಗಳು ತಪ್ಪಿಸಿಕೊಂಡು ಹೋಗುವ ದ್ವಾರಗಳಿವೆ. ಜನತೆಗೆ ಅಪರಾಧಿಯು ತನ್ನ ತಪ್ಪಿಗೆ ಶಿಕ್ಷೆಯನ್ನು ಅನುಭವಿಸುವುದೇ ಮುಖ್ಯವಾಗಿ ಬೇಕಾದುದು.

ರಾಮನಾಥನು ಕಾರು ಹತ್ತಿ ಓಡಬೇಕೆಂದಿದ್ದಾಗ, ಜನರು ಅವನ ಮೇಲೆ ಬಿದ್ದು ಚೆನ್ನಾಗಿ ಪ್ರಹರಿಸಿ ಅವನ ಜೀವನ ಲೀಲೆಯನ್ನು ಮುಗಿಸಿಯೇ ಬಿಟ್ಟರು! ಮಧ್ಯರಾತ್ರಿ, ಎರಡು ಶವಗಳ ಮೆರವಣಿಗೆಯೂ ಒಟ್ಟಿಗೇ ಹೊರಟಿತು.

ಇದು ಹೊಸ ರೀತಿಯ ವರನ ಮೆರವಣಿಗೆಯಾಯಿತು!

---

## ೮ ಕೊಲೆ ಪಾತಕಿ

ರಾಮೇಶ್ವರಿಯು ವಿಧವೆಯಾಗಿ ಹತ್ತು ವರ್ಷಗಳಾದವು. ಅವಳ ಏಕ ಮಾತ್ರ ಪುತ್ರ ವಿನೋದನೇ ಅವಳ ಜೀವನಾಧಾರ. ಅವಳು ಅವ ಶ್ರಿವರ ಮನೆಗಳಲ್ಲಿ ಕೆಲಸ ಮಾಡಿ, ಮಕ್ಕಳಿಗೆ ಪಾಠಹೇಳಿ, ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾಳೆ. ರಾಷ್ಟ್ರೀಯ ಚಳವಳಿಯು ಪ್ರಾರಂಭ ವಾದಾಗಿನಿಂದಲೂ, ಅದರಲ್ಲಿ ಮನಃಪೂರ್ವಕವಾಗಿ ಭಾಗವಹಿಸುತ್ತಿದ್ದಾಳೆ. ತನ್ನ ಮಗನನ್ನೂ ಸ್ವಯಂಸೇವಕನನ್ನಾಗಿ ಮಾಡಿದ್ದಾಳೆ. ತಾಯಿ ಮಗ ಇಬ್ಬರಿಗೂ ಯಾವಾಗಲೂ ಇದೇ ಚಿಂತೆ ಊಟ ದೊರೆತರೆ ಮಾಡುವುದು, ಇಲ್ಲವಾದರೆ ಹಾಗೇ ಮಲಗಿರೋದು ಇಬ್ಬರೂ ಪ್ರಾಣಗಳನ್ನು ಅಂಗೈಯಲ್ಲಿಟ್ಟುಕೊಂಡು ತಿರುಗುತ್ತಿದ್ದಾರೆ

ಒಂದು ದಿನ ಮೆರವಣಿಗೆ ಹೊರಟಿತು ವಿನೋದನು ಧ್ವಜವನ್ನು ಹಿಡಿದಿದ್ದ ಪೋಲಿಸರು ಬಂದು ತಡೆದು ಧ್ವಜವನ್ನು ಕಸಿದುಕೊಂಡರು. ವಿನೋದನ ಮುಂಗೈ ಮೂಳೆಗಳು ಮುರಿದಾಗಲೇ, ಅವನ ಕೈಯಲ್ಲಿದ್ದ ಧ್ವಜವನ್ನು ಅವನು ಬಿಟ್ಟದ್ದು. ಸುಮಾರು ಒಂದು ತಿಂಗಳ ನಂತರ ಅವನ ಕೈ ನೆಟ್ಟಗಾಯಿತು. ಆ ಯುವಕನ ರಕ್ತವು ಈ ಘಟನೆಯಿಂದ ಬಿಸಿಯಾಯಿತು. ಅವನಿಗೆ ಅಹಿಂಸೆಯಲ್ಲಿ ವಿಶ್ವಾಸವಿರಲಿಲ್ಲ.

"ಅಮ್ಮಾ, ಪಾಪಿಗಳನ್ನು ತೀರಿಸಿಬಿಡಲೇ ಅನ್ನಿಸುತ್ತದೆ ಹಿಂಸೆಯ ವಿನಹ ಕೆಲಸ ನಡೆಯುವುದಿಲ್ಲ".

ತಾಯಿಯು ಹಲ್ಲಿನಿಂದ ನಾಲಗೆಯನ್ನು ಒತ್ತಿ ಹೀಗೆಂದಳು— "ಮಗೂ, ಆ ರೀತಿ ಮಾತಾಡಬೇಡಪ್ಪ ನಮಗೆ ದ್ವೇಷವಿರುವುದು ಸರ್ಕಾರೀ ನೌಕರರ ಮೇಲಲ್ಲ, ಸರ್ಕಾರದ ನೀತಿಯ ಮೇಲೆ ಆ ನೀತಿಯನ್ನೇ ಕೊನೆಗಾಣಿಸಬೇಕಾಗಿರುವುದು."

''ಈ ದುಷ್ಟರ ಸಂಹಾರವಾಗದೆ, ಸ್ವರಾಜ್ಯ ದೊರೆಯಲಾರದು''.

''ಇದು ನಿನ್ನ ತಪ್ಪು ತಿಳುವಳಿಕೆ ಮಗು. ಕೊಲೆ ಮಾಡಿ ಸ್ವರ್ಗ ದೊರೆತರೂ ನಮಗೆಬೇಡ. ದ್ವೇಷದಿಂದ ದ್ವೇಷವೇ ಉತ್ಪನ್ನವಾಗುತ್ತದೆ. ನಾವು ನಮ್ಮ ಧರ್ಮ ಮತ್ತು ತ್ಯಾಗಗಳಿಂದ ಅವರ ಧರ್ಮ ಮತ್ತು

ನ್ಯಾಯಗಳನ್ನು ಸಚೇತನಗೊಳಿಸಬೇಕೆಂದಿದ್ದೇವೆ. ಹತ್ಯೆಯಿಂದ ಕ್ರಾಂತಿಯಾಗುವುದೇ ವಿನಹ, ಸ್ವರಾಜ್ಯ ದೊರೆಯಲಾರದು. ಮತ್ತು ಕ್ರಾಂತಿಯಿಂದ ಅಧಿಕಾರವು ಪುನಃ ಬಲಿಷ್ಠರ ಕೈಗೇ ಹೋಗುವುದು. ಬಡವರು ಆಗಲೂ ಗುಲಾಮರಾಗಿಯೇ ಉಳಿಯುವರು. ಹೆಸರಿಗೇನೋ ದೇಶವು ಸ್ವತಂತ್ರವಾದರೂ, ವಾಸ್ತವವಾಗಿ ಪರಿಸ್ಥಿತಿಯು ಮತ್ತಷ್ಟು ಕೆಡುವುದು."

"ಈಗೇನೋ ಆ ರೀತಿ ಹೇಳ್ತಿಯಾ, ಆದರೆ ಈಗಲೇ ಅಧಿಕಾರಿಯೊಬ್ಬನನ್ನು ಕೊಂದು ಬಂದರೆ, ಸಂತೋಷಪಡುವೆ."

"ಎಂದಿಗೂ ಇಲ್ಲ. ಆಗ ನಿನ್ನನ್ನೂ ಕೊಲೆ ಪಾತಕಿಎಂದು ತಿಳಿದು, ಅಂತಹ ನೀಚನು ನನ್ನ ಹೊಟ್ಟೆಯಲ್ಲಿ ಹುಟ್ಟದ್ದಕ್ಕಾಗಿ ಪಶ್ಚಾತ್ತಾಪ ಪಡುವೆನು. ನೀನು ನಿನ್ನ ಸಿದ್ಧಾಂತಗಳ ರಕ್ಷಣೆಗಾಗಿ ನಿನ್ನ ಪ್ರಾಣವನ್ನು ಕೊಟ್ಟಾಗಲೇ ನನಗೆ ಸಂತೋಷವಾಗುವುದು"

ವಿನೋದನು ಏನೂ ಹೇಳಲಿಲ್ಲ.

— ೨ —

ರಾತ್ರಿ ರಾಮೇಶ್ವರಿಯು ಮಲಗಿದ್ದಾಗ, ವಿನೋದನು ಯಾರೋ ಒಬ್ಬ ಅಧಿಕಾರಿಯನ್ನು ಕೊಂದು, ಎಲ್ಲಿಯೋ ತಲೆಮರೆಸಿಕೊಂಡಿದ್ದಂತೆ ಕನಸು ಕಂಡಳು. ಘಾಬರಿಯಲ್ಲಿ ಎದ್ದುನೋಡಲು, ವಿನೋದನು ಮಲಗಿದ್ದನು. "ನಾನು ಎಂತಹ ಅನಿಷ್ಟವನ್ನು ಕಂಡೆ?" ಎಂದು ಯೋಚಿಸಿ ಆಗಿನಿಂದಲೇ ಚಿಂತಿಸಹತ್ತಿದಳು. ಮಲಗಲು ನಿದ್ದೆ ಬರಲಿಲ್ಲ. ಮನಸ್ಸು ಸಂಶಯಗೊಂಡಿತು.

ಪ್ರಾತಃಕಾಲ ತಾಯಿಯನ್ನು ನೋಡಿ, ವಿನೋದನು "ಇದೇ ನಮ್ಮ, ವ್ಯಸನದಿಂದಿರುವೆ?" ಎಂದು ಕೇಳಿದನು.

"ಏನು ಹೇಳಲಿ ಮಗೂ, ರಾತ್ರಿ ನಾನೊಂದು ಕೆಟ್ಟ ಕನಸನ್ನು ಕಂಡೆ. ನೀನು ಒಬ್ಬ ಅಧಿಕಾರಿಯನ್ನು ಕೊಂದು ಓಡಿ ಹೋದಂತೆಯೂ, ನಿರಪರಾಧಿಯೊಬ್ಬನಿಗೆ ಶಿಕ್ಷೆಯಾಗುತ್ತಿದ್ದಂತೆಯೂ ಕಂಡೆ.

"ನಾನು ಸಿಕ್ಕಿಬಿದ್ದಿರುವೆನೆಂದು ಊಹಿಸಿದೆಯಾ?"

"ನೀನು ಅಂತಹ ಕೆಲಸದ ಹತ್ತಿರವೇ ಹೋಗಬಾರದೆಂದೇ ನನ್ನ ಆಸೆ ಇರುವಾಗ, ಇನ್ನು ಸಿಕ್ಕಿ ಬೀಳುವ ಪ್ರಶ್ನೆ ಎಲ್ಲಿಂದ ಬಂತು? ನಾವೂ

ಜೀವಿಸಿ, ಇತರರೂ ಜೀವಿಸಿರಲವಕಾಶ ಕೊಡುವುದೇ ನಮ್ಮ ಧರ್ಮ. ಇತರರನ್ನು ಕೊಂದು ನಾವು ಜೀವಿಸಿರುವುದು ಧರ್ಮಕ್ಕೆ ವಿರೋಧ."

"ಇದು ಧರ್ಮ ಮತ್ತು ನೀತಿಯ ಕಾಲವಲ್ಲವಮ್ಮಾ."

"ಧರ್ಮ ಮತ್ತು ನೀತಿಗೆ ಯಾವಾಗಲೂ ಜಯವಾಗೇ ಆಗಿದೆ; ಮುಂದೆಯೂ ಆಗುವುದು. ಸ್ವರಾಜ್ಯವು ದೊರೆಯುವುದು ಹತ್ಯೆಯಿಂದಲ್ಲ ತ್ಯಾಗ, ತಪಸ್ಸು ಮತ್ತು ಆತ್ಮಶುದ್ಧಿಯಿಂದ. ಲೋಭವನ್ನು ಬಿಡದೆ, ದುರ್ವ್ಯಸನಗಳಿಂದ ದೂರವಾಗದೆ, ನಮ್ಮಲ್ಲಿನ ದೋಷಗಳನ್ನು ಗಮನಿಸದೆ ಸ್ವರಾಜ್ಯ ಬಯಸುವುದೇ? ಹತ್ಯೆಯಿಂದ ದೊರೆಯುವ ಸ್ವರಾಜ್ಯವು ಹತ್ಯೆಯಿಂದಲೇ ಸ್ಥಿರವಾಗುವುದು. ಸಾಮೂಹಿಕ ಪ್ರಯತ್ನದಿಂದ ದೊರೆಯುವ ಸ್ವರಾಜ್ಯವು ರಾಷ್ಟ್ರದ ವಸ್ತುವಾಗುವುದು. ವ್ಯಕ್ತಿಗಳ ಪ್ರಯತ್ನದಿಂದ ದೊರೆಯುವ ಸ್ವರಾಜ್ಯವು ವ್ಯಕ್ತಿಗಳಿಗೆ ಸೇರಿದ್ದಾಗಿ, ಕೆಲವೇ ವ್ಯಕ್ತಿಗಳು ಖಡ್ಗದ ಬಲದಿಂದ, ಆಡಳಿತ ನಡೆಸುವರು. ನಮಗೆ ಬೇಕಾಗಿರುವುದು ಜನ ಸಾಮಾನ್ಯರ ಸ್ವರಾಜ್ಯವೇ ಹೊರತು, ಹತ್ಯಾ—ಬಲವುಳ್ಳವರ ವ್ಯಕ್ತಿ ಸಮೂಹದ್ದಲ್ಲ!"

"ಯಾರು ಕೇಳ್ತಾರಮ್ಮ ನಿನ್ನ ಭಾಷಣವನ್ನು?"

"ನೀನು ನಗುತ್ತಿದ್ದೀಯೆ, ನನಗೆ ದುಃಖವಾಗುತ್ತಿದೆ. ನನ್ನ ಎಡಗಣ್ಣು ಅದರುತ್ತಿದೆ. ಏನೋ ಒಂದು ವಿಪತ್ತು ಖಂಡಿತ ಬರಲಿದೆ".

"ವಿಪತ್ತಿಗೆ ನಾನೇನೂ ಹೆದರೋನಲ್ಲಮ್ಮ. ಯಾರು ಬರ್ತಾರೋ ಬರಲಿ." ಎನ್ನುತ್ತಾ ವಿನೋದನು ಹೊರಗೆ ಹೊರಟ.

— ೩ —

ಇವತ್ತು ಬೆಳಗಿನಿಂದ ವಿನೋದನ ಪತ್ತೆಯೇ ಇಲ್ಲ. ಕಾಂಗ್ರೆಸ್ ಕಛೇರಿಗೆ ಹೋಗಿರಬಹುದೆಂದು ತಾಯಿ ತಿಳಿದಳು. ಆದರೆ ಒಂದು ಗಂಟೆಯಾದರೂ ಬರದೆ ಹೋಗಲು, ಅವಳಿಗೆ ಚಿಂತೆಯಾಯಿತು. ರಾತ್ರಿ ಕಂಡ ಕನಸನ್ನು ನೆನಸಿ ಹೆದರುತ್ತಿದ್ದಳು. ರಾತ್ರಿಯಾದರೂ ಬರದೇ ಇರಲು, ಕಾಂಗ್ರೆಸ್ ಕಛೇರಿಗೆ ಹೋದಳು ಅಲ್ಲಿಗೆ ಅವನು ಬರಲೇ ಇಲ್ಲವೆಂದು ಹೇಳಿದರು.

ರಾಮೇಶ್ವರಿಯ ಹೃದಯವು ಒಂದು ಅಜ್ಞಾತ ಶಂಕೆಯಿಂದ ವಿಚಲಿತವಾಯಿತು. ಅಲ್ಲಿಂದ ಮನೆಗೆ ಹೋದಳು, ಅಲ್ಲಿಗೆ ಇನ್ನೂ ಬಂದಿರಲಿಲ್ಲ ಕಲ್ಪನೆಯು ಇನ್ನೂ ಭೀಷಣವಾಯಿತು. ಎಲ್ಲ ದೇವರಿಗೂ ಹರಕೆ ಕಟ್ಟಿಕೊಂಡಳು. "ಭಗವಂತಾ! ಯಾವ ಅಪರಾಧ ಮಾಡಿದ್ದಕ್ಕೆ ನನಗೆ ಈ ಶಿಕ್ಷೆ ಕೊಟ್ಟೆ? ಏನಾದರೂ ತಪ್ಪು ಮಾಡಿದ್ದರೆ ಕ್ಷಮಿಸು! ಮೊದಲೇ ತೊಂದರೆಯಲ್ಲಿ ಸಿಕ್ಕಿದ್ದೇನೆ, ಇನ್ನೂ ಹೆಚ್ಚು ಸಹಿಸಲಾರೆನು."

— ೪ —

ಅರ್ಧ ರಾತ್ರಿ ಕಳೆಯಿತು. ರಾಮೇಶ್ವರಿಯು ಇನ್ನೂ ಬಾಗಿಲಲ್ಲೇ ಕುಳಿತಿದ್ದಾಳೆ. ಯಾರೋ ಒಬ್ಬನು ಕರಿ ಕಂಬಳಿಯನ್ನು ಹೊದೆದು ಕೊಂಡು ಓಡಿ ಓಡಿ ಬಂದನು. ಮುಖವನ್ನು ಕಂಬಳಿಯಿಂದ ಮುಚ್ಚಿಕೊಂಡಿದ್ದನು.

ರಾಮೇಶ್ವರಿ ಹೆದರಿ ಪ್ರಶ್ನಿಸಿದಳು: "ಯಾರು ನೀನು?'' ಕಂಬಳಿಯನ್ನು ಧರಿಸಿದ್ದವನು ವಿನೋದನೇ ಆಗಿದ್ದನು. ಒಳಕ್ಕೆ ಹೋಗಿ ಬೇಗ ಬಾಗಿಲನ್ನು ಮುಚ್ಚುವಂತೆ ಹೇಳಿ, ಊಟಕ್ಕೆ ಬಡಿಸುವಂತೆ ತಿಳಿಸಿದನು.

"ಎಲ್ಲಿ ಹೋಗಿದ್ದೆ ಬೆಳಗಿಂದ. ಹುಡುಕಿ ಸಾಕಾಯ್ತಲ್ಲ"!

ವಿನೋದ ಹತ್ತಿರ ಬಂದು —"ಬಹಳ ಅಗತ್ಯದ ಕೆಲಸಕ್ಕಾಗಿಯೇ ಹೋಗಿದ್ದೆನಮ್ಮಾ; ಪುನಃ ಈಗಲೇ ಹೋಗಬೇಕಾಗಿದೆ. ಇನ್ನು 3–4 ತಿಂಗಳ ವರೆಗೆ ಇಲ್ಲಿರುವುದಿಲ್ಲ ಎಂದು ತಿಳಿಸಲು ಇಲ್ಲಿಗೆ ಬಂದಿದ್ದೇನೆ. ನಾನು ಯಾವುದನ್ನು ನನ್ನ ಧರ್ಮವೆಂದು ತಿಳಿದಿದ್ದೆನೋ ಅದನ್ನೇ ಮಾಡಿದ್ದೇನೆ. ಈಗ ಪ್ರಾಣ ರಕ್ಷಣೆಗಾಗಿ ಇಲ್ಲಿಂದ ಓಡಲೇ ಬೇಕಾಗಿದೆ!"

ರಾಮೇಶ್ವರಿಗೆ ಕತ್ತಲು ಕವಿದಂತಾಯಿತು. ಅಯ್ಯೋ ಮಗನೇ, ನನಗಿದ್ದ ಸಂಶಯವೇ ನಿಜವಾಯಿತೆ?'' ಎಂದಳು ವಿನೋದ ಉದ್ದಂಡ ಭಾವನೆಯಿಂದ—"ಈ ದಿನ ನಾನು ಸೈನ್ಯದ ಒಬ್ಬ ಅಧಿಕಾರಿಯನ್ನು ಒಂದೇ ಪೆಟ್ಟಿಗೆ ಕೊಂದು ಬಂದೆ. ಎಂತಹ ಏಟೂಂತಿಯಮ್ಮ!''

"ಅಲ್ಲಿ ಇನ್ಯಾರೂ ಇರಲಿಲ್ಲವೇ?

"ಯಾರ್‍ಯಾರೂ ಇರಲಿಲ್ಲ".

"ಪೋಲೀಸರಿಗೆ ತಿಳಿದಿರಬಹುದೋ ಏನೋ"?

"ಹೌದು, ಎಷ್ಟೋ ಜನರನ್ನು ಹಿಡಿದರು. ನಾನಂತೂ ಓಡಿ ಬಂದೆ".

ರಾಮೇಶ್ವರಿಯ ಮುಖವು ಗಂಭೀರವಾಯಿತು. ಪುತ್ರ ಪ್ರೇಮದಿಂದ ಸಜಲವಾಗಿದ್ದ ನೇತ್ರಗಳು, ಕ್ರೋಧದಿಂದ ಕೆಂಪಾದುವು- "ಪಾಪಿ ಕೊಲೆಪಾತಕಿ! ನೀನು ತಪ್ಪಿಸಿಕೊಂಡು ನಿರಪರಾಧಿಗಳಿಗೆ ಶಿಕ್ಷೆಯಾಗುವುದು ನನಗೆ ಬೇಕಿಲ್ಲ- ಇಂತಹ ನರಾಧಮನು ಹುಟ್ಟುವನೆಂದು ತಿಳಿದಿದ್ದರೆ ನಿನ್ನನ್ನು ಹುಟ್ಟಿದ ಕೂಡಲೆ ಕೊಂದುಬಿಡುತ್ತಿದ್ದೆ- ನೀನು ನಿಜವಾಗಿ ಗಂಡಸೇ ಆಗಿದ್ದರೆ, ನ್ಯಾಯಾಲಯಕ್ಕೆ ಹೋಗಿ ನಿನ್ನ ತಪ್ಪನ್ನು ಒಪ್ಪಿಕೊ, ಇಲ್ಲವಾದರೆ ನಿರಪರಾಧಿಗಳ ಕೊಲೆಗೂ ನೀನೇ ಕಾರಣನಾಗುವೆ-"

"ನಾನು ಅದೇ ನಿನ್ನ ಸ್ವಯಂಸೇವಕನೇ ಆಗಿರಬೇಕೂಂತ ತಾನೇ ನಿನ್ನ ಮನಸ್ಸು? ನಾನೇನೂ ಕೊಲೆಪಾತಕಿಯಲ್ಲ ನಾನು ಮುಖಂಡ."

"ಇತರರನ್ನು ಕೊಲ್ಲುವವರು ಕೊಲೆಪಾತಕಿಯಲ್ಲವೇನೋ ನೀಚ! ನಿನ್ನ ತಾಯಿಯಾಗಿ ನಾನೂ ನಿನ್ನ ಪಾಪದಲ್ಲಿ ಭಾಗಿಯಾದೆ ಇತರರಿಗಾಗಿ ಸಾಯುವವರೇ ಮುಖಂಡರಾಗಬಲ್ಲವರು; ಅವರೇ ಧನ್ಯರು, ಅವರ ತಾಯಂದಿರೇ ಧನ್ಯರು! ನಿನಗೆ ಕೊಲೆ ಮಾಡಿದೆ ಎಂದು ಹೇಳಲು ನಾಚಿಕೆಯಾಗುವುದಿಲ್ಲವೇ? ಕೊಲೆ ಮಾಡಿ ಓಡಿ ಹೋಗುವವನಿಗೆ ಏನೆಂದು ಹೇಳಬೇಕೆಂಬುದೇ ನನಗೆ ತಿಳಿಯದು"

"ನೀನು ನನ್ನ ತಾಯಿಯಾಗದೇ ಇದ್ದಲ್ಲಿ, ನಿನ್ನನ್ನೂ ಈಗಲೇ ಯಮ ಸದನಕ್ಕೆ ಕಳುಹಿಸಿ ಬಿಡುತ್ತಿದ್ದೆ! ಬದುಕಿರುವ ವರೆಗೆ ನಿನ್ನ ಮುಖವನ್ನೂ ನೋಡುವದಿಲ್ಲ" ಎಂದು ಹೇಳುತ್ತಾ ವಿನೋದ ಆವೇಶದಲ್ಲಿ ಮನೆ ಬಿಟ್ಟು ಹೊರಟನು.

ರಾಮೇಶ್ವರಿಯೂ ಅದೇ ವೇಷದಲ್ಲಿ ಮನೆ ಬಿಟ್ಟು ಹೊರಟಳು ಮಗನ ಅನೀತಿಯನ್ನು ಅವಳೀ ಸಹಿಸಲಾರದೆ ಹೋದಳು ನಿರಪರಾಧಿಗಳಿಗೆ ಮರಣ ದಂಡನೆಯಾಗುವದಕ್ಕಿಂತ, ವಿನೋದನನ್ನು ಗಲ್ಲಿಗೇರಿಸುವುದೇ ಎಷ್ಟೊ ಉತ್ತಮವೆಂದು ಅವಳು ಭಾವಿಸಿ, ಪೋಲೀಸಿಗೆ ತಾನೇ

ಹೋಗಿ ಹೇಳಿಬಿಡಲೇ ಎಂದು ಯೋಚಿಸಿದಳು, ಆದರೆ ಸ್ವಲ್ಪ ದೂರ ಹೋಗಿ ಹಿಂದಿರುಗಿದಳು. ಅಷ್ಟು ಕಷ್ಟಪಟ್ಟು ಸಲಹಿದ ಮಗನನ್ನು ತಾನೇ ಗಲ್ಲಿಗೇರಿಸುವುದೇ?

ಆದರೆ ಆ ನಿರಪರಾಧಿಗಳ ತಾಯಂದಿರು ಅಳುವುದಿಲ್ಲವೇ? ಅವರಿಗೂ ತಮ್ಮ ಮಕ್ಕಳ ಮೇಲೆ ಮಮತೆ ಇಲ್ಲವೇ? ಇಲ್ಲ, ಇಲ್ಲ, ಈ ಅತ್ಯಾಚಾರವನ್ನು ಸಹಿಸಲಾಗದು! ಪುತ್ರಹೀನಳಾಗಿರುವುದೇ ಆಕೆಗೆ ಅಪ್ರಿಯವು.

ಆತ್ಮಹತ್ಯವನ್ನು ಮಾಡಿಕೊಳ್ಳಲೇ? ಇಲ್ಲ, ಆದರಿಂದಲೂ ಆ ನಿರಪರಾಧಿಗಳು ಮರಣದಿಂದ ಮುಕ್ತರಾಗಲಾರರು ಅವರ ಅಭಾಗಿನಿ ತಾಯಂದಿರ ಹೃದಯಕ್ಕೆ ಶಾಂತಿಯುಂಟಾಗಲಾರದು. ಏನೇ ಆಗಲಿ, ತಾನೆ ಹೋಗಿ ಎಲ್ಲವನ್ನೂ ತಿಳಿಸಿ ಬಿಡಬೇಕೆಂದು ಮನಸ್ಸು ಮಾಡಿದಳು. "ನನಗೆ ಮತ್ತು ನನ್ನ ಮಗನಿಗೆ ಇಬ್ಬರಿಗೂ ಶಿಕ್ಷೆಯಾಗಲಿ! ನನ್ನ ಧೈರ್ಯ ಉಳಿಯಬೇಕು ಆದರೆ ನನ್ನ ಎದುರಿನಲ್ಲಿಯೇ ನನ್ನ ವಿನೋದನನ್ನು ಗಲ್ಲಿಗೇರಿಸುವುದನ್ನು ನಾನು ಕಣ್ಣಿನಿಂದ ನೋಡಲಾರೆ. ಏಕೆಂದರೆ ನಾನೇ ಅವನನ್ನು ಹೆತ್ತವಳು. ಭಗವಂತಾ! ನನಗೆ ಕರ್ತವ್ಯದಲ್ಲಿ ದೃಢಳಾಗಿರುವ ಶಕ್ತಿಯನ್ನು ಅನುಗ್ರಹಿಸು. ನಾನೊಬ್ಬ ದುರ್ಬಲಳು, ಪಾಪಿ, ಕೊಲೆಪಾತಕಳು!"

೬

ರಾಮೇಶ್ವರಿಗೆ ಪ್ರಜ್ಞೆ ಬಂದಾಗ ಅವಳ ನಿಶ್ಚಯವು ದೃಢವಾಗಿತ್ತು. ಆದರೂ ಆತ್ಮ ವೇದನೆಯಾಗುತ್ತಿತ್ತು ವಿನೋದನು ಅವಳ ಜೀವನದ ಆಧಾರನಾಗಿದ್ದನು. ಅವನ ಮುಖವು ಅವಳೆದುರಿನಲ್ಲಿ ಬಂದು ನಿಂತಿದೆ. ಯಾರನ್ನು ಅಪ್ಪಿ ಮುದ್ದಾಡುತ್ತಿದ್ದಳೋ ಅವನನ್ನೇ ಗಲ್ಲಿಗೇರಿಸಬೇಕಲ್ಲ! ವಿನೋದನ ಪುಸ್ತಕಗಳೂ, ಬಟ್ಟೆಗಳೂ ಅವನ ಕೋಣೆಯಲ್ಲಿದ್ದುವು. ಅವಳು ಎಲ್ಲವನ್ನೂ ತನ್ನ ಎದೆಗೆ ಅಪ್ಪಿಕೊಂಡಳು ಅಹ! ಕರ್ತವ್ಯವು ಎಷ್ಟು ಕಠಿಣವಾದುದು! ವಿನೋದನನ್ನು ಕೊನೆಯ ಸಾರಿ ಅಪ್ಪಿಕೊಂಡು, ಅವಳಿಗೆ ಚುಂಬಿಸಬೇಕೆಂದು ಮನಸ್ಸಾಯಿತು. ಬಾಲಕನನ್ನು ಹೊಡೆಯುವಾಗ ತಾಯಿಯು ಸ್ನೇಹಶೂನ್ಯಳಾಗಿ ಬಿಡುವಳೇ?

ರಾಮೇಶ್ವರಿಯು ಸ್ನೇಹದಿಂದ ಕೂಡಿ, ವಾತ್ಸಲ್ಯಪೂರಿತಳಾಗಿ ತನ್ನ ಮಗನಿಗೆ ಶಿಕ್ಷೆ ವಿಧಿಸಲು ಹೊರಟಿದ್ದಳು

— ೭ —

ಒಂದು ವಾರವಾಯಿತು. ಪೋಲೀಸರು ಒಂದು ವಿದ್ರೋಹವನ್ನು ಪತ್ತೆ ಮಾಡಿಬಿಟ್ಟರು. ನಗರದ ಹತ್ತು ಮಂದಿ ಯುವಕರು ಬಂಧಿಸಲ್ಪಟ್ಟರು. ಮೊಕದ್ದಮೆಯಾಯಿತು.

ರಾಮೇಶ್ವರಿಯ ಮುಂದೆ ಸಮುದ್ರ, ಹಿಂದೆ ಅಗ್ನಿ ಇದ್ದಾಂತಾಗಿದೆ. ಒಂದು ಕಡೆ ಕರ್ತವ್ಯನಿಷ್ಠೆಯ ಜ್ಞಾನ; ಮತ್ತೊಂದು ಕಡೆ ಮಾತೆಯ ಮಮತೆ. ಆದರೆ ದಿನಗಳು ಕಳೆದಂತೆಲ್ಲ ಕರ್ತವ್ಯದ ಚಕ್ರವು ದುರ್ಬಲವಾಗುತ್ತ ಬಂತು ಹೊಸ ಹೊಸ ತರ್ಕಗಳು ಮುಂದೆ ಬಂದು ನಿಂತುವು. ಎಲ್ಲವೂ ಈಶ್ವರೇಚ್ಛೆಯಿಂದಲೇ ನಡೆಯುವಾಗ, ಇದೂ ಅವನ ಇಚ್ಛೆಯಿಂದಲೇ ಆಗಿರಬೇಕು ಈ ಏಳು ದಿನಗಳೂ ಅವಳಿಗೆ ನೀರೇ ಆಧಾರ. ಆದರೆ ಆ ನೀರೂ ಕೂಡ ಕಣ್ಣಿನ ಮೂಲಕ ಹರಿದು ಹೋಗಿ ಬಿಡುತ್ತಿತ್ತು.

ಕಾಂಗ್ರೆಸ್ ಕಛೇರಿಗೆ ಒಂದು ದಿನ ಹೋಗುತ್ತಿದ್ದಾಗ ಹತ್ತು ಮಂದಿ ಯುವಕರು ಬಂಧಿಸಲ್ಪಟ್ಟು, ಪೋಲೀಸಿನವರ ಪಹರೆಯಲ್ಲಿ ಹೋಗುತ್ತಿದ್ದುದನ್ನು ಕಂಡಳು. ಅವರ ಹಿಂದೆ ಕೆಲವು ಮಂದಿ ಸ್ತ್ರೀ ಪುರುಷರು ತಲೆ ತಗ್ಗಿಸಿಕೊಂಡು ಹೋಗುತ್ತಿದ್ದರು.

ರಾಮೇಶ್ವರಿಯು ಸಿಪಾಯಿ ಬಳಿಗೆ ಹೋಗಿ "ಇವರೆಲ್ಲ ಕಾಂಗ್ರೆಸ್ಸಿಗೆ ಸೇರಿದವರೇ?"—ಎಂದು ಪ್ರಶ್ನಿಸಿದಳು.

ಸಿಪಾಯಿ—"ಇನ್ನೇನು ಇಂಗ್ಲಿಷಿನವರನ್ನು ಬೇರೆ ಯಾರಾದರೂ ಕೊಲ್ಲುವರೇ?"

"ಯಾರು ಕೊಲ್ಲಲ್ಪಟ್ಟವರು?"

"ಇವರೆಲ್ಲ ಒಬ್ಬ ಅಧಿಕಾರಿಯನ್ನು ಕೊಂದು ಬಿಟ್ಟಿರುವರು."

"ಕಾಂಗ್ರೆಸಿನವರು ಹಿಂಸೆ ಮಾಡುವುದಿಲ್ಲವಲ್ಲ!"

"ತಪ್ಪು ನಿರ್ಧಾರವಾಗದೇ ಇದ್ದಲ್ಲಿ ಬಿಡುಗಡೆಯಾಗುವರು".

ರಾಮೇಶ್ವರಿಯೂ ಅವರನ್ನು ಹಿಂಬಾಲಿಸಿದಳು. ಇಷ್ಟು ಜನರೂ ಮರಣಕ್ಕೆ ತುತ್ತಾಗಲು ಅವಳು ಎಂದಿಗೂ ಅವಕಾಶ ಕೊಡಲಾರಳು!

— ೮ —

ನ್ಯಾಯಾಲಯದಲ್ಲಿ ಜನರ ಗುಂಪು ಸೇರಿದೆ. ನ್ಯಾಯಾಧೀಶರು ಇನ್ನೂ ಬಂದಿರಲಿಲ್ಲ. ರಾಮೇಶ್ವರಿಯ ಪಕ್ಕದಲ್ಲಿದ್ದವಳೊಬ್ಬಳು ಅವಳನ್ನು "ಏನಕ್ಕಾ, ನಿನ್ನ ಮನೆಯವರ್ಯಾರಾದರೂ ಬಂಧಿಸಲ್ಪಟ್ಟಿರುವರೇ?" ಎಂದು ಕೇಳಿದಳು. ರಾಮೇಶ್ವರಿಯು ಉತ್ತರ ಕೊಡಲಿಲ್ಲ. ಪುನಃ ಆ ಸ್ತ್ರೀಯು "ಯಾವ ಪಾಪಿಯು ಕೊಂದು ಹಾಕಿದನೋ ಏನೋ ತಾನು ಕೊಂದು ಓಡಿ ಹೋಗಿ, ನಮಗೆಲ್ಲ ವಿಪತ್ತನ್ನು ತಂದಿದ್ದಾನೆ. ಸರಕಾರಕ್ಕಂತೂ ಕಣ್ಣೇ ಇಲ್ಲ" ಎಂದಳು. ಅನೇಕ ಸ್ತ್ರೀಯರು ಅಳ ಹತ್ತಿದರು.

ಒಬ್ಬ ವೃದ್ಧಳು—"ನಮ್ಮ ನಮ್ಮ ಹಣೇಲಿ ಬರೆದಿರುವುದನ್ನು ಅನುಭವಿಸಲೇ ಬೇಕು. ನನ್ನ ಮಗ ಏನೂ ಕಾಣ! ಹಿಡಿದಿದ್ದಾರೆ ಎರಡು ಗಂಟೆಗೆ ನ್ಯಾಯಾಧೀಶರು ಬಂದರು. ವಕೀಲರು ಮೊಕದ್ದಮೆಯನ್ನು ಮುಂದಿಟ್ಟರು. ಅಪರಾಧಿಗಳು ಎದುರಿಗೆ ಬಂದು ನಿಂತರು.

ಆ ಕಾಲಕ್ಕೆ ಸರಿಯಾಗಿ ರಾಮೇಶ್ವರಿಯು ಎದುರಿಗೆ ಬಂದು ನಮಸ್ಕರಿಸಿ ಹೀಗೆಂದಳು: "ಹುಜೂರ್, ಈ ಮೊಕದ್ದಮೆಯ ವಿಚಾರಣೆಯು ನಡೆಯುವ ಮೊದಲು ನಾನು ಒಂದು ಮಾತು ಹೇಳಬೇಕೆಂದಿದ್ದೇನೆ."

ಎಲ್ಲರೂ ಅವಳನ್ನೇ ನೋಡಲಾರಂಭಿಸಿದರು.

ನ್ಯಾಯಾಧೀಶ—ಏನದು?

ರಾಮೇಶ್ವರಿ—ಈ ಮೊಕದ್ದಮೆಯ ನಿಜಾಂಶವನ್ನು ತಿಳಿಸಲು ಇಲ್ಲಿಗೆ ಬಂದಿದ್ದೇನೆ ಅಧಿಕಾರಿಯನ್ನು ಕೊಂದವನು ನನ್ನ ಮಗ, ಉಳಿದವರೆಲ್ಲರೂ ನಿರಪರಾಧಿಗಳು

ನ್ಯಾಯಾಧೀಶ—ನಿನಗೆ ಜ್ಞಾನ ಸರಿಯಾಗಿದೆ ತಾನೇ?

ರಾಮೇಶ್ವರಿ—ನಿಜವಾಗಿ ಹೇಳ್ತೇನಿ ಸ್ವಾಮಿ ನನ್ನ ಮಗನೇ ಅಪರಾಧಿ. ಅವನ ಹೆಸರು ವಿನೋದ ಬಿಹಾರಿ ನನ್ನ ಮನೆಯಲ್ಲಿ ಅವನ ಚಿತ್ರ ಇದೆ. ನನಗೆ ನನ್ನ ಮಗನ ಮೇಲೆ ಪ್ರೀತಿ ಇದ್ದೇ ಇದೆ—

ಎಲ್ಲ ತಾಯಂದಿರಿಗೂ ಇರುವಂತೆ. ಒಂದು ವಾರದ ಕೆಳಗೆ ಅವನೇ ನನ್ನ ಸರ್ವಸ್ವವಾಗಿದ್ದನು. ಆದರೆ ನಾನು ಎಷ್ಟು ಬೇಡ ಎಂದರೂ ಕೊಲೆ ಮಾಡಿದ. ಆದುದರಿಂದ ಅವನು ನನ್ನ ಮಗನಲ್ಲ. ನನ್ನ ಮಗ ನನ್ನು ಉಳಿಸುವುದಕ್ಕಾಗಿ, ನಾನು ಇಷ್ಟೊಂದು ಜನರ ಮನೆಗಳನ್ನು ನಾಶಮಾಡಲವಕಾಶ ಕೊಡುವುದಿಲ್ಲ. ಈ ನನ್ನ ಸಹೋದರಿಯರಿಗೆ ಅವರ ಮಕ್ಕಳ ಮೇಲೆ ನನ್ನಂತೆಯೇ ಪ್ರೀತಿ ಇಲ್ಲವೇ? ಅವರೆಲ್ಲರನ್ನೂ ಸಂತಾನರಹಿತರನ್ನಾಗಿ ಮಾಡಿ ನಾನು ಪುತ್ರವತಿಯಾಗಲಾರೆನು. ನಾನಂತೂ ನಿಜ ಹೇಳಿದ್ದೇನೆ. ನ್ಯಾಯ ತೀರ್ಮಾನ ಮಾಡುವುದು ಅಧಿಕಾರಿಗಳ ಕೈಯಲ್ಲಿದೆ.

ಎಲ್ಲರೂ ಅವಳನ್ನೇ ಸುತ್ತುಗಟ್ಟಿದರು. ಅನೇಕ ಸ್ತ್ರೀಯರು ಅವಳ ಪಾದಗಳ ಮೇಲೆ ಬಿದ್ದು ಅಳಲಾರಂಭಿಸಿದರು. ಎಲ್ಲರೂ ನಿರ್ಜೀವಿಗಳಂತೆ ನಿಂತಿದ್ದರು. ಯಾರಿಗೂ ಏನು ಹೇಳುವುದಕ್ಕೂ ತೋರಲೇ ಇಲ್ಲ. ವಿನೋದನ ಚಿತ್ರವು ಎಲ್ಲರ ಮುಂದೆಯೂ ಇತ್ತು.

ಇದ್ದಕ್ಕಿದ್ದಂತೆ ಒಬ್ಬ ಯುವಕನು ಓಡಿ ಬಂದು ರಾಮೇಶ್ವರಿಯನ್ನು ಅಪ್ಪಿಕೊಂಡು ಬಿಟ್ಟನು. ತಾಯಿಯು ನೋಡಿದಳು. ಅವನನ್ನು ಕಂಡು ಅವನನ್ನು ಚುಂಬಿಸಿ, ಅಲ್ಲಿಯೇ ಅವನ ತೊಡೆಯ ಮೇಲೆ ಆಕ್ಷಣ ಪ್ರಾಣ ಬಿಟ್ಟಳು.

ಪೋಲೀಸಿನವರು ವಿನೋದನನ್ನು ಬಂಧಿಸಿದರು. ಮೊಕದ್ದಮೆಯು ಮುಂದಕ್ಕೆ ಹಾಕಲ್ಪಟ್ಟಿತು.

---

## ೯ ನಿಜ ಸತಿ

— ೧ —

ರಾಮಶಂಕರ ಮತ್ತು ಅವನ ಪತ್ನಿ ರೂಪಕುಮಾರಿ ಇವರಿಬ್ಬರಲ್ಲಿ ಬಹಳ ಪ್ರೇಮವಿತ್ತು. ಅವರ ವಿವಾಹವಾಗಿ ಮೂರು ವರ್ಷವಾಗಿತ್ತು. ಆದರೆ ಅವರಿಬ್ಬರೂ ಒಂದೇ ಒಂದು ದಿನ ಸಹ ಒಬ್ಬರನ್ನೊಬ್ಬರು ಅಗಲಿರಲಿಲ್ಲ. ರೂಪಕುಮಾರಿಯ ತಾಯಿಯ ಮನೆಯವರು ಮಗಳನ್ನು ಎಷ್ಟು ಸಾರಿ ಕರೆದರೂ, ಅವಳು ಪತಿಯನ್ನಗಲಿ ಹೋಗಲು

ಇಷ್ಟಪಡಲಿಲ್ಲ. ತಾನಿಲ್ಲದಿದ್ದರೆ ಪತಿಗೆ ಒಂದು ದಿನವೂ ಮನಶ್ಶಾಂತಿ ಇರುವುದಿಲ್ಲವೆಂದು ಅವಳು ತಿಳಿದಿದ್ದಳು.

ಒಂದು ದಿನ ಸಂಜೆ, ರೂಪಕುಮಾರಿಯು ಹೊಲಿಯುತ್ತ ಕುಳಿತ್ತಿದ್ದಳು. ರಾಮಶಂಕರನು ಮನೆಯನ್ನು ಪ್ರವೇಶಿಸಿದನು. ಮುಖವು ಇಳಿದು ಹೋಗಿತ್ತು ಮಂಚದ ಮೇಲೆ ಕುಳಿತುಕೊಂಡು "ಈ ಜೀವನ ಸಾಗರವನ್ನು ಹೇಗೆ ದಾಟಬೇಕೋ ಕಾಣೆ. ಎಷ್ಟು ಪ್ರಯತ್ನಪಟ್ಟರೂ ಏನೂ ಪ್ರಯೋಜನವಾಗಲಿಲ್ಲ. ನೀನು ಕೆಲಸ ಮಾಡುವುದನ್ನು ನೋಡಿದಾಗಲೆಲ್ಲಾ, ನನಗೆ ಬಹಳ ಸಂಕಟವಾಗುತ್ತದೆ'' ಎಂದನು.

ರೂಪಕುಮಾರಿ—(ನೀರನ್ನು ತಂದುಕೊಡುತ್ತಾ) ಇದಕ್ಕೇಕೆ ಚಿಂತೆ ಮಾಡುವಿರಿ? ಕಸೂತಿ ಹಾಕುವುದೂ ಸಹ ಬಹಳ ದೊಡ್ಡ ಕೆಲಸವೇ?

"ಕಸೂತಿ ಹಾಕವೆ ಇದ್ದಿದ್ದರೆ, ಇಷ್ಟು ಹೊತ್ತಿಗೆ ಮನೆಯ ಅವಸ್ಥೆ ಏನಾಗುತ್ತಿತ್ತೋ ಏನೋ? ನನ್ನಿಂದ ಯಾರಿಗೂ ಸುಖವಿಲ್ಲ. ನಿನ್ನ ಒಡವೆಗಳನ್ನೆಲ್ಲ ಮಾರಿಯಾಯಿತು, ಇನ್ನೂ ನಮ್ಮ ತೊಂದರೆಗಳು ಮುಗಿದಂತೆ ತೋರುವುದಿಲ್ಲ''.

"ಏಳಿ, ಮೊದಲು ಊಟ ಮಾಡಿ. ನನಗಂತೂ ಒಡವೆಗಳ ಚಿಂತೆ ಸ್ವಲ್ಪವೂ ಇಲ್ಲ. ನೀವು ಸುಖವಾಗಿರುವುದೇ ನನ್ನ ಸೌಭಾಗ್ಯವೆಂದು ತಿಳಿದಿದ್ದೇನೆ. ನಂದಿನಿಗಾಗಿ ಏನೂ ಚಿಂತೆಮಾಡಬೇಡಿ"

"ನೀನು ನನ್ನನ್ನು ಅತಿಯಾಗಿ ಪ್ರೀತಿಸಿ, ಒಂದು ದಿನವೂ ನಿನ್ನನ್ನು ಬಿಟ್ಟುಹೋಗಲಾರದಂತೆ ಮಾಡಿಬಿಟ್ಟಿದ್ದೀಯೆ ಮೊದಲಿಂದಲೂ ನೀನು ಸ್ವಲ್ಪ ಬಿರುಸಾಗಿ ಮಾತನಾಡುತ್ತಿದ್ದರೆ, ನನ್ನ ಸ್ಥಿತಿಯು ಈ ರೀತಿ ಆಗುತ್ತಿರಲಿಲ್ಲ".

"ನನಗೇನಾದರೂ ತೊಂದರೆ ಆದರಲ್ಲವೇ ನಿಮ್ಮ ಮೇಲೆ ಸಿಟ್ಟುಗೊಳ್ಳಬೇಕಾದುದು? ಜಗತ್ತಿನ ಸಕಲೈಶ್ವರ್ಯವೇ ಒಂದು ವೇಳೆ ನನಗೆ ದೊರೆತರೂ, ನನಗೆ ಬೇಡ ನೀವೇ ನನ್ನ ಸರ್ವಸ್ವ. ಸಾಕ್ಷಾತ್ ಈಶ್ವರನೇ ಬಂದು ವಿಮಾನದಲ್ಲಿ ನನ್ನನ್ನು ಸ್ವರ್ಗಕ್ಕೆ ಕರೆದುಕೊಂಡು ಹೊದರೂ, ನಾನು ನಿಮ್ಮನ್ನು ಬಿಟ್ಟು ಹೋಗುವವಳಲ್ಲ. ಈಶ್ವರನು

ಕೇಳಿದರೂ, ನನ್ನ ಸ್ವರ್ಗವು ಇಲ್ಲೇ ಇದೆಯೆಂದು ಹೇಳಿ, ನನ್ನ ಸ್ವಾಮಿಯನ್ನು ಚಿರಂಜೀವಿಯಾಗಿ ಮಾಡುವಂತೆ ಪ್ರಾರ್ಥಿಸಿಕೊಳ್ಳುವೆನು."

— ೨ —

ನಂದಿನಿಯು ಈಗ ಮನೆಯಲ್ಲಿಲ್ಲ. ರೂಪಕುಮಾರಿಯೊಬ್ಬಳೇ ಎಲ್ಲ ಕೆಲಸಗಳನ್ನೂ ಮಾಡಬೇಕು. ಅವಳ ಅತ್ತೆಯಾದ ಲಜ್ಜಾದೇವಿಯು ಸೊಸೆಗೆ ಆದಷ್ಟು ಸಹಾಯಮಾಡಬೇಕೆಂದರೂ, ಇವಳು ಅವಕಾಶ ಕೊಡದೆ ತಾನೇ ಮಾಡಿಕೊಳ್ಳುವಳು. ಒಂದು ತಿಂಗಳಿಂದಲೂ ಅವಳು ಒಂದು 'ಟೇಬಲ್ ಕ್ಲಾತ್'ಗೆ ಕಸೂತಿ ಹಾಕುತ್ತಿದ್ದಳು. ಇವತ್ತು 15 ರೂಪಾಯಿ ದೊರೆತಿದೆ. ಯಾರಿಗೆ ಬಟ್ಟೆ ಅಗತ್ಯವೆಂಬ ಬಗ್ಗೆ ಅತ್ತೆ ಸೊಸೆಯರಲ್ಲಿ ಚರ್ಚೆ ನಡೆಯುತ್ತಿದೆ. ಜಗಳವೇನೋ ಎಲ್ಲರ ಮನೆಗಳಲ್ಲಿಯೂ ನಡೆಯುವುದು. ಆದರೆ ಇಲ್ಲಿನ ಜಗಳದ ವಿಶೇಷವೇನಂದರೆ, ಸೊಸೆಯು ಅತ್ತೆಯ ಪರವಾಗಿಯೂ, ಅತ್ತೆಯು ಸೊಸೆಯ ಪರವಾಗಿಯೂ ವಾದಿಸುತ್ತಿದ್ದಾರೆ.

ಅತ್ತೆ—"ನನಗೆ ಇನ್ನೂ ಎರಡು ಸೀರೆಗಳಿವೆ 6 ತಿಂಗಳವರೆಗಂತೂ ಏನೂ ಭಯವಿಲ್ಲ. ನಿನ್ನ ಸೀರೆಗಳು ಬಹಳ ಹರಿದಿವೆ. ನಾನು ನಿನಗಾಗಿ 4 ಸೀರೆ ತರಿಸಿಕೊಡುತ್ತೇನೆ- ಮತ್ತು ಎರಡು ಸೀರೆಗಳನ್ನೂ ಐದು ರೂಪಾಯಿಯನ್ನೂ ನಂದಿನಿಗೆ ಕಳಿಸಿಕೊಡುತ್ತೇನೆ-

ರೂಪ—"ನನ್ನ ಸೀರೆಗಳು ಅಷ್ಟೇನೂ ಹರಿದಿಲ್ಲ. ಅಮ್ಮಾ, ನೀವೇ ತರಿಸಿಕೊಳ್ಳಿ, ನಂದಿನಿಗೂ ಕಳುಹಿಸಿ"

ಲಜ್ಜಾದೇವಿಯು ತನ್ನ ಪತಿಯ ಕಾಲವನ್ನು ಸ್ಮರಿಸಿಕೊಂಡು ಅತ್ತಳು. ಅವಳ ಪತಿಯು ಬಹಳ ಧನಿಕನಾಗಿದ್ದನು

ರೂಪ—"ಅಮ್ಮಾ, ನಿಜವಾಗಿ ಹೇಳುತ್ತೇನೆ. ನನಗೆ ಯಾವ ವಿಧವಾದ ದುಃಖವೂ ಇಲ್ಲ. ತಮ್ಮಂತಹ ಸಾಧ್ವೀ ಶಿರೋಮಣಿಯ ಚರಣಸೇವೆಯು ದೊರೆತುದು ನನ್ನ ಸೌಭಾಗ್ಯವೆಂದೇ ತಿಳಿದಿದ್ದೇನೆ'

"ಇದೂ ಒಂದು ಜೀವನವೇನಮ್ಮಾ?"

"ಹಣದಿಂದ ಸುಖವು ದೊರೆಯುವುದೇನಮ್ಮಾ? ಧನಿಕರಾಗಿದ್ದೂ, ತಮ್ಮ ಅದೃಷ್ಟವನ್ನು ನಿಂದಿಸುತ್ತಿರುವ ಎಷ್ಟೋ ಮಂದಿ ಸಹೋದರಿಯರನ್ನು ನೋಡಿದ್ದೇನೆ. ಸುಖವಿರುವುದು ಪ್ರೇಮದಲ್ಲಿ. ಎಲ್ಲಿ ಪ್ರೇಮವಿಲ್ಲವೋ, ಅಲ್ಲಿ ಸುಖವೆಲ್ಲಿ ಬಂತು?"

ಆ ಸಮಯಕ್ಕೆ ಸರಿಯಾಗಿ ರಾಮಶಂಕರನು ಸಂತೋಷದಿಂದ ಬಂದು ತಾಯಿಯೊಡನೆ—"ಅಮ್ಮಾ, ಅಮ್ಮಾ, ಸಿಹಿ ಹಂಚು, ನನಗೆ 50 ರೂಪಾಯಿಯ ಕೆಲಸ ಸಿಕ್ಕಿದೆ. ಈ ವಾರವೇ ಸೀತಾಪುರಕ್ಕೆ ಹೋಗಿ, ಕೆಲಸದ ಮೇಲೆ ಹಾಜರಾಗಬೇಕು" ಎಂದನು.

ಮೊದಲು ಅವನೊಬ್ಬನೇ ಹೋಗಿ ಮನೆಮಾಡಿ, ನಂತರ ಪರಿವಾರದವರನ್ನು ಕರೆದುಕೊಂಡು ಹೋಗಬೇಕೆಂದು ನಿಶ್ಚಯಿಸಲಾಯಿತು ಆದರೆ ರೂಪಕುಮಾರಿಯು ವಿಯೋಗವನ್ನು ಸಹಿಸಲಸಮರ್ಥಳಾಗಿದ್ದಳು.

ಲಜ್ಜಾದೇವಿ—"ಈಗಲೇ ಹೋಗಿ ಏನು ಮಾಡುವೆ? ಇನ್ನೂ ಅಲ್ಲಿ ಮನೆಮಾಡಿಲ್ಲ ಸೀತಾಪುರವೇನ್ಮಹಾದೂರ! ಪ್ರತಿ ಶನಿವಾರ ಬರಬಹುದು".

ರೂಪ—"ಏನ್ಮಾಡಲಮ್ಮಾ, ಒಂದು ದಿನವೂ ಬಿಟ್ಟಿರಲಾರೆ ಅವರಿಗೂ ಕೂಡ ಯಾವಾಗಲೂ ಒಂಟಿಯಾಗಿದ್ದು ಅಭ್ಯಾಸವಿಲ್ಲ ಊಟಕ್ಕೇನು ಮಾಡುವರೋ ಕಾಣೆ. ಮನೆ ಸಿಕ್ಕ ಕೂಡಲೆ ಹೊರಟು ಹೋಗೋಣ".

ಅತ್ತೆಸೊಸೆಯರು ತಮ್ಮ ಭವಿಷ್ಯದ ಸುಖಸ್ವಪ್ನಗಳನ್ನು ಕಾಣ ಹತ್ತಿದರು. ಸೇವಕನೊಬ್ಬನನ್ನು ಇಟ್ಟುಕೊಳ್ಳಬೇಕೇ ಬೇಡವೆ? ಮನೆ ಎಂತಹುದಿರಬೇಕು? ನಗರದ ಹೊರಗೆ ಹೋಗಿ ವನಭೋಜನ ಮಾಡಬೇಕು—ಎಂಬಿವೇ ಮೊದಲಾದುವನ್ನು ಕುರಿತು ಅವರು ಯೋಚಿಸುತ್ತಿದ್ದರು

ಮನದ ಮಂಡಿಗೆಯಲ್ಲಿ ವಿಚಿತ್ರವಾದ ರಸ, ಆನಂದವಿದೆ. ಎಷ್ಟು ಸವಿದರೂ ತೃಪ್ತಿಯಾಗುವುದೇ ಇಲ್ಲ. ನಮ್ಮ ಜೀವನವೆಲ್ಲವೂ ಈ ಆನಂದವನ್ನು ಅನುಭವಿಸುವುದರಲ್ಲೇ ಕಳೆದು ಹೋಗುತ್ತದೆ. ಕೊನೆಗೆ

ಸಾಯುವ ಗಳಿಗೆಯಲ್ಲಿ ಸಹ ಇನ್ನೂ ಆಸೆ ಇರುತ್ತದೆ. ಈ ಇಬ್ಬರೂ ಈ ಮುಂಡಿಗೆಯನ್ನೇ ತಿನ್ನುತ್ತಿದ್ದರು.

೩

ನಾಲ್ಕನೆ ದಿನ ರಾಮಶಂಕರನು ಹೊರಡಲು ಸಿದ್ಧನಾದನು. ರೂಪ ಕುಮಾರಿಯು ರಾತ್ರಿಯಿಂದಲೇ ಅಳುತ್ತಿದ್ದಳು ಪತಿಯು ಹೊರಡು ವಾಗ "ನಿಮಗೆ ಯಾವಾಗ ಮನೆ ಸಿಕ್ಕುತ್ತೋ ಏನೋ! ನೀವು ಯಾವಾಗ ಹಿಂದಿರುಗುವಿರೋ ಏನೋ" ಎಂದು ಹೇಳಿದಳು.

ರಾಮಶಂಕರ—"ನನ್ನ ಅವಸ್ಥೆಯೂ ಅದೇ ರೀತಿಯಾಗಿದೆ! ಆದರೆ ಏನ್ಮಾಡಲಿ? ಒಂದು ಕ್ಷಣವೂ ನಿನ್ನನ್ನು ಮರೆತಿರಲಾರೆ 4-5 ದಿನಗಳಲ್ಲಿ ಖಂಡಿತ ಹಿಂದಿರುಗುವೆನು ಈಗಲೇ ಕರೆದುಕೊಂಡು ಹೋಗೋಣ ಎಂದ್ರೆ, ಅಮ್ಮ ಏನು ತಿಳಿದುಕೊಳ್ಳುವಳೋ! ಮೊದಲು ಮನೆ ನೋಡಬೇಕು".

ಲಜ್ಜಾದೇವಿಯು, ಗಾಡಿಯುವನು ಬಂದು ಕೂಗುತ್ತಿರುವನೆಂದು ಹೇಳಿದಳು

ರಾಮಶಂಕರ "ಬಂದೆನಮ್ಮಾ. ಬಂದೆ" ಎಂದವನೇ ಪುನಃ ಪತ್ನಿಯೊಡನೆ—"ಪ್ರಿಯೆ, ನಗುತ್ತಾ ಬೀಳ್ಕೊಡು"—ಎಂದನು.

ರೂಪಕುಮಾರಿಯು ಪತಿಯು ಪಾದಕ್ಕೆ ನಮಸ್ಕರಿಸಿ, ಕಣ್ಣೀರು ಸುರಿಸುತ್ತಾ "ಪ್ರಾಣವು ನಿಮ್ಮ ಬಳಿ ಇದೆ ಆದರೆ ದೇಹ ಮಾತ್ರ ಇಲ್ಲಿರುತ್ತದೆ"—ಎಂದು ಹೇಳಿದಳು.

ರಾಮಶಂಕರ—(ಎದೆಗಪ್ಪಿಕೊಂಡು) "ಅಳಬೇಡ, ರೂಪಾ!"

ಲಜ್ಜಾದೇವಿ—"ಮಗೂ ಹೊತ್ತಾಯಿತಂತೋ ರೈಲಿಗೆ"

ರಾಮಶಂಕರ—"ಪ್ರಿಯೆ, ಸ್ವಲ್ಪ ನೀರನ್ನು ಕೊಡು-ಬೇಡ ಬೇಡ, ಹೊತ್ತಾಯಿತು, ಅಮ್ಮ ಹುಚ್ಚು ಎಂದಾಳು".

ರೂಪಕುಮಾರಿ (ನೀರನ್ನು ತಂದು) "ಅಂದರನ್ನಿ, ಸುಮ್ಮನಿರಿ. ನಾನೇನೋ ಹುಚ್ಚಿಯೇ ಆಗಿದ್ದೇನೆ ಹುಚ್ಚರಿಗೆ ಆಗುವ ಆನಂದವು ಉಳಿದವರಿಗೆಲ್ಲಿ ದೊರೆಯುವುದು!"

ರಾಮಶಂಕರನು ನೀರು ಕುಡಿದು ಹೊರಟನು.

ತಾಯಿ - "ಯಾವಾಗ ಬರುವೆ ಮಗೂ!"

"ನಾಡಿದ್ದೇ ಬಂದು ಬಿಡ್ತೀನಮ್ಮಾ. ರಾತ್ರಿ ಗಾಡಿಗೆ ಬರ್‍ತೀನಿ ಎಚ್ಚರವಾಗೇ ಇರಿ".

— ೪ —

ರಾಮಶಂಕರನು ಕೆಲಸಕ್ಕೆ ಸೇರಿದ ನಂತರ, ತನ್ನ ಅಧಿಕಾರಿಗೆ ಮನೆಯ ಬಗ್ಗೆ ಪ್ರಶ್ನೆಮಾಡಿದನು. ಅಧಿಕಾರಿಯು "ಏನೀಗಲೇ ಅವಸರ, ಈ ದಿನ ನನ್ನ ಮನೇಲೇ ಇರಿ ನಾಳೆ ನೋಡೋಣವಂತೆ ಮನೆಯಲ್ಲಿ ನಿಮ್ಮ ಹೆಂಡತಿ ಒಂಟಿಯಾಗೇನೂ ಇಲ್ಲವಲ್ಲ, ತಾಯಿಯವರೂ ಇದ್ದಾರಲ್ಲವೆ?" ಎಂದನು.

ರಾಮಶಂಕರ –"ಇದ್ದಾರೆ, ಆದರೆ ಹೆದರಿಕೊಳ್ಳುವಳು".

ಅಧಿಕಾರಿ—ನಿಮಗೇ ಬಿಟ್ಟಿರೋಕಾಗೋದಿಲ್ಲ ಎಂದೇಕೆ ಹೇಳಬಾರದು? ಹೆಂಡತಿಯಿಲ್ಲದ ಜೀವನವೂ ಒಂದು ಜೀವನವೇ?

ರಾಮಶಂಕರ—"ನನಗಂತೂ ಅವರು ಅಳೋದನ್ನ ನೋಡಿದರೆ ಹೆದರಿಕೆ ಆಗ್ತದಪ್ಪ. ಅಮ್ಮ ಇಲ್ಲದಿದ್ರೆ, ಒಂದು ಗಳಿಗೆಯೂ ಒಬ್ಬಳನ್ನೇ ಬಿಟ್ಟುಬರ್‍ತಿರಲಿಲ್ಲ".

ಮಾರನೆ ದಿನ ಇಬ್ಬರೂ ಮನೆಯನ್ನು ನೋಡಲು ಹೊರಟರು. ಆ ಹಾಳು ಮನೆಗಳನ್ನು ಕಟ್ಟಿದವರಿಗೆ ಸ್ವಲ್ಪವೂ ಬುದ್ಧಿಯೇ ಇರಲಿಲ್ಲ ಅಂತ ಕಾಣುತ್ತೆ ಒಂದಕ್ಕೆ ಕಿಟಕಿ ಇದ್ದರೆ, ಒಂದಕ್ಕೆ ಹಿತ್ತಿಲೇ ಇಲ್ಲ. ಹಾಗೂ ಹೀಗೂ ತಿರುಗಿ, ಕೊನೆಗೊಂದು ಮನೆಯನ್ನು ಗೊತ್ತು ಮಾಡಿದರು. ಆ ದಿನ ರಾತ್ರಿಯೇ ತಾನು ಅಲ್ಲಿರುವುದಾಗಿ ರಾಮಶಂಕರನು ಹೇಳಿದನು. ಆದರೆ ಅಧಿಕಾರಿಯು ನಕ್ಕು ತಾನು ಸೇವಕನನ್ನು ಕಳುಹಿಸಿ ಅದನ್ನು ಸ್ವಚ್ಛಮಾಡಿಸುವುದಾಗಿ ಹೇಳಿ ಹೊರಟು ಹೋದನು. ಆದರೆ ಅವನು ಹೋದ ಕೂಡಲೆ ರಾಮಶಂಕರನೇ ಗುಡಿಸಲಾರಂಭಿಸಿದನು ಆ ಮನೆಯಲ್ಲಿದ್ದ ಒಂದು ಕೋಣೆಯು ತನ್ನ ಪತ್ನಿಗೆ, ಸಂಬಳ ಬಂದ ಕೂಡಲೆ ಬಣ್ಣ ಬಳಿಸಿದರಾಯಿತು. ಕೆಲವು ಚಿತ್ರಗಳನ್ನೂ ತರಬೇಕು, ಎಂದು ಯೋಚಿಸುತ್ತಿರುವಾಗ ಸೇವಕನು ಅವನ ಸಾಮಾನನ್ನೂ ಸ್ವಲ್ಪ ಆಹಾರವನ್ನೂ ತಂದಿಟ್ಟುಹೋದನು.

ರಾಮ ಶಂಕರನು ಊಟಮಾಡಿ ಮಲಗಿಬಿಟ್ಟನು. ಮನೆಯಲ್ಲಿ ದೀಪ ಉರಿಯುತ್ತಿತ್ತು, ಲೋಟದಲ್ಲಿ ನೀರಿತ್ತು ಆದರೆ ಮನಸ್ಸೆಲ್ಲ ರೂಪಳ ಮೇಲೇ ಇತ್ತು. ಇನ್ನೂ ಅರ್ಧರಾತ್ರಿಯಿರುವಾಗಲೇ ಎಚ್ಚರ ವಾಯಿತು. ಬೆಳಗಾದ ಮೇಲೆ ಮನೆಯ ಕೋಣೆಗಳಿಗೆಲ್ಲ ಬೀಗ ಹಾಕಿ ಹೊರಡುವುದು ತಡವಾಗಬಹುದೆಂದು ಆಗಲೇ ಎದ್ದನು ಆದರೆ ಒಂದು ಕಲ್ಲನ್ನು ಎತ್ತಲು ಕಾಲಿಟ್ಟ ಕೂಡಲೆ ಜಾರಿ ಕೆಳಗಿದ್ದ ಹಳ್ಳಕ್ಕೆ ಬಿದ್ದು ಬಿಟ್ಟನು. ತಲೆಗೆ ಬಹಳ ಪೆಟ್ಟು ಬಿದ್ದು, ಮಾತನಾಡದೆ ಬಿದ್ದಿದ್ದನು. ಬೆಳಗಾದ ನಂತರ, ಝಾಡಮಾಲಿಯು ನೋಡಿ ಕೂಗಿಕೊಳ್ಳಲು, ಅಕ್ಕ ಪಕ್ಕದವರೆಲ್ಲ ಸೇರಿದರು!

— ೬ —

ರೂಪಕುಮಾರಿಗೆ ಅನ್ನ, ನಿದ್ದೆ ಏನೂ ಇಲ್ಲ; ಯಾವ ಕೆಲಸದಲ್ಲೂ ಮನಸ್ಸಿಲ್ಲ! ಮೂರನೆ ದಿನ ಅವರು ಬರುವರೆಂಬ ಭರವಸೆಯಿಂದ, ಆಗಲೇ ಸಾಮಾನನ್ನು ಕಟ್ಟಲಾರಂಭಿಸಿದಳು. ಬಟ್ಟೆಗಳನ್ನು ಪೆಟ್ಟಿಗೆಯಲ್ಲಿಟ್ಟಳು. ಇನ್ನೇನು ಬರಬಹುದೆಂದು ಹೊರಗೆ ಬಂದು ನೋಡುವಳು ಗಾಡಿಯ ಸಮಯವಾಗಿ ಹೋದರೂ, ರಾಮಶಂಕರನು ಬರಲೇ ಇಲ್ಲ.

ಆಗ ಯಾರೋ ಬಂದ ಶಬ್ದವನ್ನು ಕೇಳಿ ಹೊರಗೆ ಬಂದಳು. ಸೀತಾಪುರದಲ್ಲಿ ಜವಳಿ ಅಂಗಡಿಯನ್ನಿಟ್ಟಿದ್ದ ಪಕ್ಕದ ಮನೆಯ ರಾಜ ನಾಥ! ಅವನೊಡನೆ ತನ್ನ ಪತಿಯ ವಿಷಯವನ್ನು ವಿಚಾರಿಸಿ 'ಅವರು ಏಕೆ ಬರಲಿಲ್ಲ?' ಎಂದು ಕೇಳಿದಳು. ರಾಜನಾಥನು "ಅವರಿಗೆ ಬಹಳ ಕೆಲಸವಿತ್ತು, ನೀನೇ ಹೋಗಿ ಕರೆದುಕೊಂಡು ಬಾ ಎಂದು ನನ್ನನ್ನು ಕಳುಹಿಸಿದರು" ಎಂದನು.

"ಮನೆ ಮಾಡಿರುವರೇ?"

"ಹೌದು"

"ಈಗಲೇ ಹೊರಡೋಣವೇ?"

"ಈಗಲೇ ಹೊರಡಿ".

"ಅವರು ಚನ್ನಾಗಿರುವರೇ?"

ರಾಜನಾಥನಿಗೆ ಏನು ಉತ್ತರ ಕೊಡುವುದಕ್ಕೂ ತಿಳಿಯಲಿಲ್ಲ ಸಂತೋಷದ ಸುದ್ದಿ ಇದ್ದರೆ ತಾನೇ ತಿಳಿಸುವುದು? ಭಗವಂತಾ! ಎಂತಹ

ಲೀಲೆ ನಿನ್ನದು! ಮಕ್ಕಳು ಬೊಂಬೆಗಳನ್ನು ಮುರಿದು, ನಂತರ ಅಳುವುವು. ನೀನು ನಿರ್ಮಿಸುವ ಬೊಂಬೆಗಳನ್ನೂ ನೀನೇ ಮುರಿಯುವೆ! ನಿನಗೆ ಸ್ವಲ್ಪವೂ ದುಃಖವಾಗುವುದಿಲ್ಲವೇ?

— ೭ —

ಅತ್ತೆ ಸೊಸೆಯರಿಬ್ಬರೂ ಸೀತಾಪುರದ ಆ ಅಭಾಗಿ ಮನೆಯನ್ನು ಪ್ರವೇಶಿಸಿದಾಗ, ಸಂಜೆಯಾಗಿ ಹೋಗಿತ್ತು. ಬೀದಿಯ ಅನೇಕ ಜನರು ಶವದ ಬಳಿ ಕುಳಿತಿದ್ದರು. ಹೆಂಗಸರು ಅಲ್ಲಿಗೆ ಹೋದ ಕೂಡಲೆ, ರೋದನದ ಸಂಯುಕ್ತ ಧ್ವನಿಯು ಅವರನ್ನು ಸ್ವಾಗತಿಸಿತು. ರೂಪಕುಮಾರಿಯು ಪತಿಯ ಮೇಲೆ ಮೊದಲು ಸಿಟ್ಟುಗೊಳ್ಳುವುದಾಗಿ ಯೋಚಿಸುತ್ತಿದ್ದಳು. 2--3 ದಿನದಲ್ಲಿ ಬರುತ್ತೇನೆಂದು ಹೇಳಿ, ವಾರವಾದರೂ ಬರಲಿಲ್ಲ, ಸಾಲದ್ದಕ್ಕೆ ಯಾರನ್ನೋ ಹೇಳಿ ಕಳಿಸಿರುವುದು ಬೇರೆ! ಮನೆಯೊಳಗೆ ಕಾಲಿಟ್ಟ ಕೂಡಲೆ ಅವಳಿಗೆ ದಿಕ್ಕೇ ತೋರದಂತಾಯಿತು. ಓಡಿಹೋಗಿ ಪತಿಯನ್ನು ತಬ್ಬಿಕೊಂಡಳು! ತಾಯಿಯ ಗೋಳಂತೂ ಅವರ್ಣನೀಯ. ರೂಪಕುಮಾರಿಯು ಅಳುತ್ತಾ "ಅಮ್ಮಾ ನೋಡಿದಿರಾ! ಇವರ ನಿಷ್ಠುರತೆಯನ್ನು! ಇವರನ್ನು ಬಿಟ್ಟು ಒಂದು ದಿನವೂ ನಾನು ಇರುತ್ತಿರಲಿಲ್ಲ! ಇವರನ್ನು ನೋಡು, ನನ್ನನ್ನು ಬಿಟ್ಟು ಹೊರಟೇ ಹೋಗಿರುವುದನ್ನು! ಅಯ್ಯೋ, ಈ ರೀತಿ ಮೋಸಪಡಿಸುವರೆಂದು ನನಗೆ ತಿಳಿಯಲಿಲ್ಲವಲ್ಲ! ಅಮ್ಮಾ. ನಾನು ಮಾಡಿದ ಅಪರಾಧವೇನು ಹೇಳಮ್ಮಾ! ದೇವರೇ, ಒಂದು ದಿನ ಸಹ ಇವರ ಕೂಡೆ ಸುಳ್ಳು ಹೇಳಿದವಳಲ್ಲವಲ್ಲ! ಅಯ್ಯೋ!. ಯಾವ ಪಾಪಿ ಮೋಸಮಾಡಿದ್ನಪ್ಪಾ!"

ಅತ್ತೆ—"ಮಗಳೇ, ಸಹಿಸು ಪತಿ ಮತ್ತು ಪುತ್ರರಿಬ್ಬರನ್ನೂ ಕಳೆದುಕೊಂಡಿರುವ ನನ್ನನ್ನು ನೋಡು".

ಅಷ್ಟರಲ್ಲಿ ಅಧಿಕಾರಿಯು ಬಂದು "ಎಲ್ಲಿ ಸ್ವಲ್ಪ ಹಿಂದೆ ಹೋಗಿ ಶವವನ್ನು ತೆಗೆದು ಕೊಳ್ಳೋಣ ಬಹಳ ಹೊತ್ತಾಗಿ ಹೋಗಿದೆ" ಎಂದನು

ರೂಪಕುಮಾರಿ— "ಏನನ್ನು ಬಿಡಲಿ! ನನ್ನ ತಾಯಿತಂದೆಗಳು ಅವರನ್ನು ನನಗೆ ಕೊಟ್ಟು, ಅವರೊಡನೆಯೇ ಜೀವಿಸಿರಬೇಕೆಂದು

ಹೇಳಿದ್ದರು. ನೀವು ಅವರನ್ನು ಹೇಗೆ ಕೇಳುತ್ತಿರುವಿರಿ? ನನ್ನ ಬಳಿಯಿಂದ ದೂರ ಸರಿಯಿರಿ!"

ಅಧಿಕಾರಿ—"ತಂಗಿ; ನಾನು ಎಷ್ಟೋ ಜನರನ್ನು ನೋಡಿದ್ದೆ. ಆದರೆ ಇಂತಹ ಸತಿಪತಿಗಳನ್ನು ಎಲ್ಲಿಯೂ ಕಾಣಲಿಲ್ಲ ಯಾವಾಗಲೂ ನಿನ್ನ ಹೆಸರನ್ನೇ ಹೇಳುತ್ತಿದ್ದರು".

ರೂಪಕುಮಾರಿ—"ನಾನೂ ಅವರ ಹೆಸರನ್ನೇ ಹೇಳುತ್ತಾ ಸಾಯುವೆನು ನಮ್ಮೆರಡು ಶವಗಳನ್ನೂ ಎತ್ತಿಕೊಂಡು ಹೋಗಿರಿ. (ಪತಿಯನ್ನು ಅಪ್ಪಿ) ನಾಥ, ತಡವೇಕೆ? ನನ್ನನ್ನೂ ಬೇಗ ಕರೆದು ಕೊಳ್ಳಿ".

ಅರ್ಧರಾತ್ರಿಯ ಸಮಯ. ಎರಡೂ ಶವಗಳ ಮೆರವಣಿಗೆಯೂ ಒಟ್ಟಿಗೇ ಹೊರಟಿತು!

---

## ೧೦ ಸವತಿ

ಸ್ತ್ರೀಯು ಸುಂದರಿಯಾಗಿರುವುದು ಅಗತ್ಯ. ಇಲ್ಲವಾದರೆ ಅವಳ ಜೀವನವೇ ವ್ಯರ್ಥವಾಗುತ್ತದೆ. ಅವಳಲ್ಲಿ ಎಷ್ಟೇ ಒಳ್ಳೆ ಗುಣಗಳಿರ ಬಹುದು, ಅವಳು ಎಷ್ಟೇ ಸುಶೀಲಳಿರಲಿ, ಎಷ್ಟೇ ಸ್ನೇಹಮಯಿ ಯಾಗಿರಲಿ, ಎಷ್ಟೇ ವ್ಯವಸ್ಥಾ ಕುಶಲಳಿರಲಿ, ರೂಪು ಇರದೆ ಇದ್ದರೆ, ಏನೂ ಗುಣವಿಲ್ಲ. ಆಗ ಪುರುಷನು ಮತ್ತೊಂದು ವಿವಾಹವನ್ನು ಮಾಡಿಕೊಳ್ಳುವುದು ಅನಿವಾರ್ಯವೇ ಆಗಿಹೋಗುವುದು! ರೂಪರಹಿತ ಳಾದ ಸ್ತ್ರೀಯು ಎಲ್ಲಿಯೂ ಮುಖವನ್ನೇ ಎತ್ತಲಾರಳು. ಆದುದ ರಿಂದಲೇ ಇನ್ಸ್‌ಪೆಕ್ಟರ್ ಗಯಾ ಪ್ರಸಾದರು ಬೇರೆ ವಿವಾಹವಾದಾಗ, ರಾಧೆಯು ಏನೂ ಹೇಳಲೇ ಇಲ್ಲ. ಹೇಳಿದರೂ ಕೇಳುವರ್‍ಯಾರು? ಪಾಪ, ಬಡ ಪಾಯಿಯು ತನ್ನ ಶಿಶುವಿನೊಡನೆ ಶಾಂತಿಯಿಂದ ಇರಹತ್ತಿ ದಳು. ಎರಡನೆ ಹೆಂಡತಿಯು ಬಹಳ ಸುಂದರಿಯೂ, ಹಸನ್ಮುಖಿಯೂ ಆಗಿದ್ದಳು ಈ ಮೊದಲು ತಿಂಗಳುಗಟ್ಟಲೆ ಮನೆಗೆ ಬಿಡದೆ ಬರುತ್ತಿದ್ದ ಗಯಾ ಪ್ರಸಾದರು, ಈಗ ನವವಧುವಿನೊಡನೆ ಜೀವನದ ಆನಂದ ವನ್ನು ಅನುಭವಿಸತೊಡಗಿದರು.

ರಾಧೆಯ ಅಣ್ಣನಾದ ಗಜಾನನನಿಗೆ ಇದು ತಿಳಿಯಲು, ತಕ್ಷಣ ತಂಗಿಯ ಬಳಿಗೆ ಓಡಿಬಂದನು—ಅತ್ಯಂತ ಕ್ರೋಧದಿಂದ ಹೊಡೆಯಲು ಸಿದ್ಧನಾಗಿ, ಕೋರ್ಟಿಗೆ ಕರತಂದು ನಿಲ್ಲಿಸಿ, ಗಯಾ ಪ್ರಸಾದರ ಮಾನ ಕಳೆದು, ವೇತನದಲ್ಲಿ ಅರ್ಧವನ್ನು ಕೊಡುವಂತೆ ಮಾಡುವೆನು ಎಂದು ಗರ್ಜಿಸಿದನು. ಆಗ ರಾಧೆಯು ಶಾಂತಗೊಳಿಸುತ್ತಾ, "ಅಣ್ಣಾ, ಅವರು ನನ್ನನ್ನು ಇಷ್ಟು ಅನಾದರಿಸುವಾಗ, ಅವರಿಂದ ಜೀವನಾಂಶ ವನ್ನೇಕೆ ತೆಗೆದುಕೊಳ್ಳಲಿ? ಕೈಕಾಲು ಗಟ್ಟಿಯಾಗಿರುವ ವರೆಗೆ ಕೂಲಿ ಮಾಡಿ ಹೊಟ್ಟೆ ತುಂಬಿಸಿಕೊಳ್ಳುವೆನು ಜೀವನಾಂಶವನ್ನು ತೆಗೆದು ಕೊಳ್ಳುವುದು ನನಗೆ ಅವಮಾನ" ಎಂದು ಹೇಳಿದಳು

ಗಜಾನನ—"ಇಲ್ಲಿ ನೀನು ನಿರಾಧಾರಳಾಗಿ ಬಿದ್ದಿರುವುದನ್ನು ನಾನು ನೋಡಲಾರೆ ನಾನು ಬದುಕಿರುವವರೆಗೆ ನೀನು ಕೂಲಿ ಮಾಡಲವಕಾಶ ಕೊಡಲಾರೆ. ನಿನಗಾದ ಅವಮಾನವು ನನಗೂ ಆದಂತಲ್ಲವೇ?"

"ನಿನಗೆ ಮನಸ್ಸಿದ್ದರೆ ಪ್ರಭಾಕರನನ್ನು ಕರೆದುಕೊಂಡು ಹೋ ಗಣ್ಣ, ನಾನಂತೂ ಇಲ್ಲೇ ಇರುವೆನು".

"ಒಬ್ಬಳನ್ನೇ ಬಿಟ್ಟು ಹೋಗಲು ನನಗೇಕೋ ಭಯವಾಗುತ್ತಿದೆ. ನನ್ನೊಡನೆ ಬರಲು ನಿನಗೇನು ತೊಂದರೆ?"

"ತಂದೆತಾಯಿಗಳು ಯಾರ ಕೈಯನ್ನು ಹಿಡಿ ಎಂದರೋ, ಅವರ ಹೆಸರಿನಲ್ಲೇ ಅಳುತ್ತ ಕುಳಿತಿರುವುದು ನನ್ನ ಧರ್ಮ"

ಎಷ್ಟು ಹೇಳಿದರೂ ರಾಧೆಯು ಕೇಳದಿರಲು, ಗಜಾನನನು ಪ್ರಭಾ ಕರನನ್ನು ಕರೆದುಕೊಂಡು ಹೊರಟು ಹೋದನು. ರಾಧೆಯು ಕೂಲಿ ಯನ್ನು ಮಾಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದಳು.

೨

ಎಷ್ಟೋ ಕಾಲವಾಗಿ ಹೋಯಿತು. ಆದರೂ ಗಯಾ ಪ್ರಸಾದರು ರಾಧೆಯನ್ನಾಗಲಿ, ಪ್ರಭಾಕರನನ್ನಾಗಲಿ ವಿಚಾರಿಸಿಕೊಳ್ಳಲೇ ಇಲ್ಲ ಎರಡನೆಯ ಪತ್ನಿಯಾದ ಚಂದ್ರಮತಿಗೆ ಎರಡು ಮಕ್ಕಳಿದ್ದರು

ಒಂದು ದಿನ ಇದ್ದಕ್ಕಿದ್ದಂತೆ ಪ್ರಭಾಕರನಿಗೆ "ನಿಮ್ಮ ತಂದೆ ಹಾಸಿಗೆ ಹಿಡಿದಿದ್ದಾರೆ ಸ್ಥಿತಿ ಚಿಂತಾಜನಕವಾಗಿದೆ. ತಕ್ಷಣ ಹೊರಟು ಬಾ" ಎಂದು ತಂತಿ ಬಂತು.

ಪ್ರಭಾಕರನು ಅಂಚೆಯ ಇಲಾಖೆಯಲ್ಲಿ ಕೆಲಸದಲ್ಲಿದ್ದನು. ತಂತಿ ಬಂದೊಡನೆಯೇ ತಾಯಿಯ ಬಳಿಗೆ ಓಡಿಬಂದನು

ರಾಧೆ—"ಹೋಗಿ ಬಾ ಮಗು, ಎಷ್ಟಾದರೂ ತಂದೆಯಲ್ಲವೇ?"

ಪ್ರಭಾಕರ—"ನೀನೂ ಬಾರಮ್ಮಾ."

"ಇಲ್ಲ, ಮಗು, ನಾನು ಬರುವುದಿಲ್ಲ. ಯಾವ ದಿನ ಅವರು ಮತ್ತೊಬ್ಬಳನ್ನು ವಿವಾಹವಾದರೋ, ಆ ದಿನವೇ ಅವರು ನನ್ನ ಪಾಲಿಗೆ ಸತ್ತಂತೆ. ನೀನು ಅವರ ಮಗ, ಹೋಗಲೇಬೇಕು".

"ಅವರಿಂದ ನನಗಾಗಿರುವ ಸುಖ ಏನು? ನಾನೂ ಹೋಗೋದಿಲ್ಲ, ಅವರ ಮುಖವನ್ನೇ ನೋಡುವುದಿಲ್ಲ ಎಂದು ನಿಶ್ಚಯಮಾಡಿದ್ದೇನೆ".

"ಹಾಗನ್ನಬಾರದಪ್ಪ, ನಿನ್ನ ದೇಹದಲ್ಲಿ ನಿನ್ನ ತಂದೆಯವರ ರಕ್ತ ಇದೆ; ಅವರ ರಕ್ತವೇ ನಿನ್ನ ನಾಡಿಗಳಲ್ಲಿ ಹರಿಯುತ್ತಿದೆ. ನೀನು ಅವರ ಋಣದಿಂದ ಎಂದಿಗೂ ಮುಕ್ತನಾಗಲಾರೆ".

"ನಿನ್ನ ಆಜ್ಞೆಯಂತೆ ಹೋಗುತ್ತೇನಮ್ಮ. ಒಂದುವೇಳೆ ಅವರು ಇಲ್ಲಿಗೆ ಬರಬೇಕೂಂದ್ರೆ?"

"ಕರ್ಕೊಂಡು ಬಾ".

ಪ್ರಭಾಕರನು ಕೂಡಲೆ ಹೊರಟನು. ಆದರೆ ಅವನು ಅಲ್ಲಿಗೆ ಮುಟ್ಟುವುದಕ್ಕೆ ಮೊದಲೇ ಗಯಾ ಪ್ರಸಾದರು ಸ್ವರ್ಗಸ್ಥರಾಗಿ ಹೋಗಿದ್ದರು.

ಚಂದ್ರಮತಿ (ರೋದಿಸುತ್ತ) "ಮಗನೇ, ನಿಮ್ಮ ತಂದೆಯು ನನ್ನನ್ನು ನಡು ನೀರಿನಲ್ಲಿ ಬಿಟ್ಟು ಹೊರಟುಹೋಗಿ ಬಿಟ್ಟರು. ಸಾಯುವ ತನಕ ನಿನ್ನ ಹೆಸರನ್ನೇ ಹೇಳುತ್ತಿದ್ದರು. ನಿನ್ನನ್ನು ನೋಡಬೇಕೆಂದು ಬಹಳ ತವಕಪಡುತ್ತಿದ್ದರು. ನಾನು ಅವರ ಮುಂದೆ ಕುಳಿತು ಅಳು ತಿದ್ದರೆ, ಅವರು 'ಹೆದರಬೇಡ, ನಿನ್ನನ್ನು ಪ್ರಭಾಕರನು ನೋಡಿಕೊಳ್ಳು,

ವನೆಂದು ಹೇಳುತ್ತಿದ್ದರು. ತಾವು ಮಾಡಿದುದಕ್ಕಾಗಿ ಬಹಳ ಪಶ್ಚಾತ್ತಾಪ ಪಡುತ್ತಿದ್ದರು

ಪ್ರಭಾಕರನು ಬಹಳವಾಗಿ ರೋದಿಸಿದನು, 12-13 ವರ್ಷಗಳಿಂದ ಮುಖವನ್ನೇ ನೋಡದೆ ಇದ್ದ ತಂದೆಗಾಗಿ ರೋದಿಸಿದನು! ಚಂದ್ರಮತಿಯು ಕಾಲ ಮೇಲೆ ತಲೆಯನ್ನಿಟ್ಟು ಬಿಕ್ಕಿ ಬಿಕ್ಕಿ ಅತ್ತನು.

ಮೂರನೇ ದಿನ ಅವನು ಚಂದ್ರಮತಿ ಮತ್ತು ಅವಳ ಮಕ್ಕಳೊಡನೆ ಮನೆಗೆ ಬಂದನು. ಅಲ್ಲೇ ಅಂತ್ಯ ಕರ್ಮ ಮಾಡಬೇಕೆಂದು ನಿಶ್ಚಯ ಮಾಡಿದನು.

— ೩ —

ರಾಧೆಯು ಚಂದ್ರಮತಿಯನ್ನು ನೋಡಿ ದುಃಖಪಟ್ಟಳು ಸ್ವಲ್ಪ ಸಿಟ್ಟು ಬಂತು. "ಎಷ್ಟು ದಿನದಿಂದ ಕಾಯಿಲೆ ಬಿದ್ದಿದ್ದರು? ಸಮಾಚಾರವೇ ತಿಳಿಯಲಿಲ್ಲವಲ್ಲ" ಎಂದಳು.

ಚಂದ್ರ—(ರೋದಿಸುತ್ತ) "ಅಕ್ಕ, ಆರು ತಿಂಗಳಿಂದ ಹಾಸಿಗೆ ಹಿಡಿದಿದ್ದರು. ಇಷ್ಟು ಬೇಗ ನನ್ನನ್ನು ಅಗಲುವರೆಂದು ನನಗೇನು ಗೊತ್ತು? ನಿನ್ನನ್ನು ಸದಾ ಸ್ಮರಿಸುತ್ತಲೇ ಇದ್ದರು. ನಾನು ಮಾಡಿದ ಅಪರಾಧವನ್ನೆಲ್ಲಾ ಕ್ಷಮಿಸಕ್ಕಾ, ನನ್ನನ್ನು ನಿನ್ನ ದಾಸಿಯೆಂದೇ ತಿಳಿದುಕೊಳ್ಳಕ್ಕಾ."

ರಾಧೆಯು ಸಮಾಧಾನ ಪಡಿಸಿದಳು. "ತಂಗಿ, ಈ ಮನೆ ನಿನ್ನದೇ ಎಂದು ತಿಳಿ ಏನೇನೂ ಸಂಕೋಚಪಟ್ಟುಕೊಳ್ಳಬೇಡ, ತಿಳಿಯಿತೇ" ಎಂದು ಹೇಳಿದಳು.

ಒಂದು ದಿನ ಚಂದ್ರಮತಿಯು, ರಾಧೆಯೊಡನೆ ಪ್ರಭಾಕರನ ವಿವಾಹ ಮಾಡಬೇಕೆಂದೂ, ಹುಡುಗನು ಪ್ರಾಪ್ತವಯಸ್ಕನಾಗಿರುವುದರಿಂದ ಮಲತಾಯಿಯ ಮೇಲೆ ಏನಾದರೂ ಮಾತು ಹೊರಿಸಲ್ಪಡುವ ಸಂಭವವಿದೆಯೆಂದೂ ಹೇಳಿದಳು. ರಾಧೆಯೂ ಒಪ್ಪಿದಳು ಹುಡುಗಿಯೊಬ್ಬಳನ್ನು ಮೊದಲೇ ನೋಡಿಕೊಂಡಿದ್ದರು ವಿವಾಹವು ನಡೆಯಲು ತಡವಾಗಲಿಲ್ಲ. ಒಂದು ದಿನ ಚಂದ್ರಮತಿಯು ಸೊಸೆಯೊಡನೆ ಹೀಗೆಂದಳು:—"ಮಗಳೇ, ನಿನ್ನ ಅತ್ತೆಯ ಸೇವೆಯನ್ನು ಸಹ ಮಾಡು

ತ್ತಿರಬೇಕಮ್ಮ. ಅವರ ಆಶೀರ್ವಾದದಿಂದಲೇ ಮನೆಯು ನಡೆಯುತ್ತಿರುವುದು. ನಿನ್ನ ಮೈದುನರನ್ನೂ ನಿನ್ನ ಮಕ್ಕಳಂತೆಯೇ ತಿಳಿ."

ರಾಧೆಯು ಇದನ್ನು ಕೇಳಿ ಮುಗ್ಧಳಾದಳು ನಿಜವಾಗಿಯೂ ಚಂದ್ರಮತಿಯು ದೇವತೆಯೇ ಆಗಿದ್ದಳು.

ಸಂಯೋಗದ ವಿಷಯ, ಪ್ರಭಾಕರನಿಗೆ ವರ್ಗವಾಯಿತು. ಚಂದ್ರಮತಿಯು "ಅವನನ್ನು ಒಂಟಿಯಾಗಿ ಕಳುಹಿಸುವುದಿಲ್ಲ ನೀವು ಸೊಸೆಯೊಡನೆ ಹೋಗಿ. ನಾನು ಇಲ್ಲಿ ಕೊಲಮನೆಗಳನ್ನು ನೋಡಿಕೊಂಡಿರುತ್ತೇನೆ, ಮಕ್ಕಳನ್ನೂ ಕರೆದುಕೊಂಡು ಹೋಗಿ. ಇಲ್ಲಿದ್ದರೆ ಕೆಟ್ಟು ಹೋಗುವರು" ಎಂದು ರಾಧೆಗೆ ಹೇಳಿದಳು

ರಾಧೆ—(ಪ್ರಭಾಕರನೊಡನೆ) "ನೀನು ಒಬ್ಬನೇ ಹೋಗಬೇಡ. ಚಂದ್ರಮತಿ, ನಿನ್ನ ಹೆಂಡತಿ ಎಲ್ಲರೂ ಬರುವರು ನಾನು ಇಲ್ಲೇ ಇರುತ್ತೇನೆ. ನಾನೂ ನಿನ್ನೊಡನೆ ಬಂದರೆ ಚಂದ್ರಮತಿಯು ಬೇರೆ ಏನಾದರೂ ತಿಳಿದುಕೊಳ್ಳುವಳೋ ಏನೋ."

ಆದರೂ ಮಗನನ್ನು ಬಿಟ್ಟಿರಲಾರದೆ, ರಾಧೆಯೂ ಹೊರಟಳು

— ೪ —

ಪ್ರಭಾಕರನು ತನ್ನ ಆದಾಯವನ್ನೆಲ್ಲ ಚಂದ್ರಮತಿಯ ಕೈಗೇ ಕೊಡುತ್ತಿದ್ದನು. ಏನು ಸಲಹೆಯನ್ನು ಬೇಕಾದರೂ ಅವಳನ್ನೇ ಕೇಳುತ್ತಿದ್ದನು. ಮನೆಯ ಮೇಲ್ವಿಚಾರಣೆಯೆಲ್ಲ ಅವಳದೇ ಆಗಿತ್ತು. ರಾಧೆಯು ಕೇವಲ ದೇವಿಯಾಗಿದ್ದಳು, ಚಂದ್ರಮತಿಯು ಪೂಜಾರಿಣಿ.

ರಾಧೆ ಮತ್ತು ತನ್ನ ಹೆಂಡತಿಯು ಯಾವಾಗಲಾದರೂ ಅತೃಪ್ತಿಯನ್ನು ತೋರಿಸಿದರೆ, ಪ್ರಭಾಕರನು "ನಮ್ಮ ಮನೆಯ ವಿಷಯದಲ್ಲಿ ಯಾರೂ ಬೆಟ್ಟು ತೋರಿಸಬಾರದೆಂದೇ ನನ್ನ ಉದ್ದೇಶ ಏನಾದರೂ ಮಾತು ಬಂದರೆ ಜನರು ತಾಯಿ ಮಗ ಸೇರಿ ಹಿಂದಿನ ದ್ವೇಷವನ್ನು ತೀರಿಸಿಕೊಳ್ಳುತ್ತಿರುವರು ಅಂದಾರು" ಎಂದು ಹೇಳಿಬಿಡುವನು.

ರಾಧೆ 'ಹಾಗಾದರೆ ಅವಳೇ ಎಲ್ಲಕ್ಕೂ ಯಜಮಾನಿಯಾಗಿರಲಿ, ನನ್ನಿಂದೇನಾಗಬೇಕಾಗಿದೆ"

"ಅಮ್ಮಾ, ನಾನಂತೂ ನಿಸ್ಸಂಗ. ಏನಾದರೂ ಒಂದು ಮಾತು

ಹೆಚ್ಚಾಗಿ ಹೇಳಿದರೂ ನೀನು ಸಿಟ್ಟಾಗುವುದಿಲ್ಲ. ಚಿಕ್ಕಮ್ಮನಿಗೆ ಸ್ವಲ್ಪವೂ ಮನಸ್ಸಿಗೆ ತೊಂದರೆಯಾಗದಂತೆ ನೋಡಿಕೊಳ್ಳುವುದು ನಮ್ಮ ಧರ್ಮ".

ಚಂದ್ರಮತಿಯೂ ನಿಧಾನವಾಗಿ ತನ್ನ ಪ್ರಭಾವವನ್ನು ಬೀರಲಾರಂಭಿಸಿದಳು. ಪ್ರಭಾಕರನು ಮನೆಯಲ್ಲಿರುವ ತನಕ ಅವಳು ದಯೆಯ ಮೂರ್ತಿಯೇ ಆಗಿರುತ್ತಿದ್ದಳು ಅವನು ಕೆಲಸಕ್ಕೆ ಹೊರಟ ಕೂಡಲೇ, ಅತ್ತೆ ಸೊಸೆಯರ ಮೇಲೆ ಉರಿದು ಬೀಳುತ್ತಿದ್ದಳು ರಾಧೆಯು ಮಗನಿಗೆ ಹೇಳಿದರೂ, ಅವನು ಕೇಳದವನಂತೆ ಇರುತ್ತಿದ್ದನು

ಒಂದುದಿನ ರಾಧೆಯು ಸಿಟ್ಟಾಗಿ ತನ್ನ ಊರಿಗೆ ಹೊರಟು ಹೋದಳು. ಸೊಸೆಯು ಗಂಡನನ್ನು ಬಿಟ್ಟೆಲ್ಲಿ ಹೋಗುವಳು? ಈಗ ಚಂದ್ರಮತಿಯದೇ ಆಡಳಿತ ಪ್ರಭಾಕರನು ತನ್ನ ಬಲೆಗೆ ಬಿದ್ದಿರುವಾಗ, ಸೊಸೆಯನ್ನು ಕೇಳುವವರಾರು?

ಪ್ರಭಾಕರನು ಮನೆಗೆ ಬಂದ ಕೂಡಲೆ, ಚಂದ್ರಮತಿಯು ಫಲಹಾರವನ್ನು ತಂದಿಟ್ಟು ಅವನೊಡನೆ ಸರಸಸಲ್ಲಾಪವಾಡತೊಡಗುವಳು. ನಿಜವಾಗಿಯೂ ಚಂದ್ರಮತಿಯು ವಿಧವೆಯಾಗಿರಲಿಲ್ಲ; ವಿಧವೆಯಾಗಿದ್ದವಳು ರಮಾದೇವಿ.

ಒಂದುಸಾರಿ ರಮೆಯ ಸೀರೆಯು ಹರಿದು ಚೂರುಚೂರಾಗಿರಲು, ಒಂದು ಸೀರೆಯನ್ನು ತರಿಸಿಕೊಡುವಂತೆ ಚಂದ್ರಮತಿಯನ್ನು ಕೇಳಿದಳು. ಆಗ ಅವಳು ಹುಬ್ಬನ್ನು ಗಂಟುಹಾಕಿಕೊಂಡು ಈ ರೀತಿ ಹೇಳಿದಳು— "ನಿನ್ನ ಸೀರೆ ಯಾವಾಗ ನೋಡ್ಲಿ, ಹರಿದೇ ಇರುತ್ತೆ. ಅದನ್ನೇನು ಹಲ್ಲಿಂದ ಕತ್ತರಿಸಿ, ಹರಿದು ಹಾಕುವೆಯೋ ಏನೋ ಕಾಣೆ. ಹೊಸ ಸೀರೆ ತಂದು ಇನ್ನೂ 3—4 ತಿಂಗಳು ಸಹ ಆಗಿಲ್ಲ''.

"ಅಲ್ಲ, ಅತ್ತೆ, ಇದನ್ನು ತಂದು 8 ತಿಂಗಳಾಗಲಿಲ್ಲವೇ?"

"ಹೇಳಿದೆನಲ್ಲ, ಈಗ ಸೀರೆ ತರಲು ಸಾಧ್ಯವಿಲ್ಲ ಅಂತ" ಎಂದು ಹೇಳಿ ಅಡಿಗೆ ಮನೆಗೆ ಹೊರಟು ಹೋದಳು.

ಚಂದ್ರಮತಿಯು ಕುಶಲ ಸೈನಿಕನಂತೆ ತನ್ನ ಆತ್ಮ ರಕ್ಷಣೆಯ ಉಪಾಯವನ್ನು ಯೋಚಿಸಲಾರಂಭಿಸಿದಳು. ಪ್ರಭಾಕರನು ಮನೆಗೆ

ಬಂದ ಕೂಡಲೇ "ಏನಪ್ಪಾ. ನಿನ್ನ ಹೆಂಡತಿಯು ನಿನಗೇನಾದರೂ ಹೇಳಿದ್ದಳೇ ಇವತ್ತು?" ಎಂದು ಕೇಳಿದಳು.

ಪ್ರಭಾಕರ—"ಏನೂ ಇಲ್ಲವಲ್ಲ, ಏನು ಸಮಾಚಾರ?"

"ಏನೂ ಇಲ್ಲ, ನಾನು ವಿದವೆಯಂತೆಯೇ ಇದ್ದೇನೆ. ಇಂತಹ ಗಂಡ ಇರೋದೂ ಒಂದೇ, ಸಾಯೋದೂ ಒಂದೇ ಎಂದಳು ನನಗೆ ಸಹಿಸಲಾಗಲಿಲ್ಲ. ಯಾವಾಗಲೂ ಸಿಡುಗುಟ್ಟುತ್ತಲೇ ಇರುತ್ತಾಳೆ".

ಪ್ರಭಾಕರನಿಗೆ ಬಹಳ ಸಿಟ್ಟು ಬಂತು, ಆದರೂ ಅವನು ಏನನ್ನೂ ಹೇಳಲೇ ಇಲ್ಲ.

ಚಂದ್ರಮತಿ—"ಇವಳಿಗೆ ನೀನು ಹೇಳಬಾರದೇಕೆ? ಹೆಂಗಸರನ್ನು ತಲೆ ಮೇಲೆ ಹೊತ್ತುಕೊಂಡ ಫಲ ಅದು! ಹೆಂಗಸು ಗಂಡಸನ್ನ ಬೈಯ್ಯೋದೂಂದ್ರೇನರ್ಥ?"

"ನೀನೇ ಹೇಳಬಾರದೇ?"

"ಅಯ್ಯೋ. ಹೇಳಿದರೆ ಕೇಳೋರ್ಯ್ಯಾರಪ್ಪ? ನನ್ನ ಪತಿಯನ್ನು ಬೈದು, ಅವನು ಸತ್ತು ನನಗೀ ಅವಸ್ಥೆಯಾಯ್ತಲ್ಲ ಎಂದು ಶಪಿಸುತ್ತಾ ಇರ್ತಾಳೆ ಹೌದು, ನಾನು ಅಭಾಗಿನಿಯಾಗದೆ ಇದ್ರೆ, ಈ ಮಾತೆಲ್ಲ ಎಲ್ಲಿ ಕೇಳ್ತಿದ್ದೆ?" ಎಂದು ಗಟ್ಟಿಯಾಗಿ ಅಳಹತ್ತಿದಳು. ಅವಳ ಅಳುವನ್ನು ನೋಡಿ, ಪ್ರಭಾಕರನಿಗೆ ಸಿಟ್ಟು ಬಂದು ಹೀಗೆ. ಹೇಳಿದನು:—

"ಅಮ್ಮಾ, ನೀನೇಕೆ ಅಳುವೆ? ಅಪ್ಪ, ಸತ್ತರೇನು, ನಾನಿಲ್ಲವೇ? ಯಾರಪ್ನ ಮನೇಲೂ ನೀನು ಇಲ್ಲವಲ್ಲ. ಯಾರಾದರೂ ನಿನ್ನನ್ನು ಒಂದು ಮಾತು ಅಂದ್ರೂ ಸರಿ, ನಾಲಗೆ ಸೀಳಿಬಿಡ್ತೀನಿ. ಸ್ವಲ್ಪ ರಾಣೀನ ಕೇಳ್ತೀನಿ, ತಡಿ, ಹಳ್ಳಿಗೆ ಕಳಿಸಲೋ ಹೇಗೇ ಅಂತ".

"ಪ್ರಭಾಕರ, ನನ್ನಿಂದ ನಿಮ್ಮ ಮನೆಯಲ್ಲಿ ಜಗಳವೇಕೆ ಆಗಬೇಕು? ನಾನಂತೂ ಅಭಾಗಿನಿ. ಯಾರು ಏನ್ಬೇಕಾದ್ರೂ ಹೇಳಲಿ, ಎಲ್ಲ ದೇವರ ಇಚ್ಛೆ" ಎಂದು ಅವನ ಕೈಹಿಡಿದುಕೊಂಡು ಹೇಳಿದಳು.

ಇದನ್ನು ಕೇಳಿ ಅವನಿಗೆ ಮತ್ತಷ್ಟು ಸಿಟ್ಟುಬಂದು, ಕೈಯನ್ನು ಬಿಡಿಸಿಕೊಂಡು ಪತ್ನಿಯ ಬಳಿಗೆ ಓಡಿದನು. ಚಂದ್ರಮತಿಯು ಓಡಿ ಹೋಗಿ ಅವನ ಕೈಹಿಡಿದುಕೊಂಡು ಹೀಗೆಂದಳು —"ನನ್ನಾಣೆ, ನಿನ್ನ

ಹೆಂಡತಿಗೆ ಏನೂ ಕೇಳಬೇಡ. ಎಲ್ಲ ನನ್ನ ಕರ್ಮಫಲ. ನಾನ್ಯಾಕೆ ನಿನ್ನ ಕೈಲಿ ಹೇಳಿದ್ನೆಪ್ಪಾ"!

— ೫ - -

ರಾತ್ರಿ ಪ್ರಭಾಕರನು ಪತ್ನಿಗೆ ಹೀಗೆಂದನು—"ಏನು ಬಾಯಿಗೆ ಬಂದಂತೆ ಬಗಳ್ತೀಯಂತಲ್ಲ ನಾನ್ಯಾರು ಅನ್ನೋದು ಇನ್ನೂ ತಿಳೀದು ನಿನಗೆ; ಜೋಕೆ, ಸರಿ ಮಾಡಿಬಿಟ್ಟೇನು".

ರಮೆ—"ಇದೇನು; ಇಷ್ಟು ಸಿಟ್ಟಾಗಿರುವಿರೇಕೆ? ಏನ್ಸಮಾಚಾರ?

"ನಿನ್ನಂತಹ ಹೆಂಗಸನ್ನ ಚೂರುಚೂರು ಮಾಡಿದ್ರೂ, ಪಾಪವಿಲ್ಲ".

"ಹೌದು, ಮೂಗಿಲ್ಲದಿದ್ದರೆ ನೆಗಡಿಯೂ ಇಲ್ಲ. ಮದುವೆ ಯಾಗುವಾಗ, ಹೆಂಡತಿಗೆ ಅನ್ನಬಟ್ಟೆ ಕೊಡಬೇಕಾಗ್ತದೇಂತ ತಿಳಿದಿರ ಲಿಲ್ಲವೇ? ಅಷ್ಟೂ ತಿಳಿದೇ ಇದ್ರೆ ಮದುವೆ ಆದಿರೇಕೆ?"

'ಹಾಗಾದ್ರೆ, ಇವರೆಲ್ಲರಿಗೂ ವಿಷ ಕೊಡೂಂತಿಯಾ? ಅವರಿಗೂ ಅನ್ನ ಬಟ್ಟೆ ಕೊಟ್ರೆ, ನಿನಗೇಕೆ ಹೊಟ್ಟೆ ಉರಿ? ನಿನ್ನಪ್ಪನ ಮನೇದೇನೂ ತಂದಿಲ್ಲ ತಾನೇ?"

ರಮೆ—(ಉರಿದು ಬಿದ್ದು) "ನಮ್ಮಪ್ಪ ಕೊಡದೆ ಇರೋದೇನೋ ಸರಿ; ಆದರೆ ನಿಮ್ಮಪ್ಪ ಏನು ಮಹಾ ಆಸ್ತಿ ಬಿಟ್ಟು ಹೋಗಿರೋದು? ಯಾರ ಸಂಪಾದನೆಗೆ ಇತರರ ಅಧಿಕಾರವಿದೆಯೋ, ಅದರ ಮೇಲೆ ನನಗೂ ಅಧಿಕಾರವಿದ್ದೇ ಇದೆ ತಾನೇ? ನಾನೇನೂ ಭಿಕ್ಷೆ ಬೇಡುತ್ತಿಲ್ಲ. ಉಡಲು ಸೀರೆ ಕೇಳಿದ್ದೇ ತಪ್ಪು. ನಿಮ್ಮ ಚಿಕ್ಕಮ್ಮ ಕೊಟ್ಟದ್ದೇನೂ ನಾನು ತಿಂತಾ ಇಲ್ಲವಲ್ಲ"

"ಹೌದು, ಚಿಕ್ಕಮ್ಮನದೇ ನೀನು ತಿಂತಾ ಇರೋದು. ಅವಳು ಕೊಟ್ಟದ್ದನ್ನೇ ಎಲ್ಲರೂ ತಿನ್ನಬೇಕು. ಬೇಕಾದ್ರೆ ಇರು, ಇಲ್ಲವಾದ್ರೆ ಹೋಗಿ ಕೂಲಿ ಮಾಡಿ ಬೇರೆ ಇರು ನಾನು ಸತ್ತೆ ಅಂತ ತಿಳಿಬೇಡಾ ನ್ನೋರು ಯಾರು!"

ರಮೆಯ ಹೃದಯಕ್ಕೆ ಬಹಳ ನೋವಾಯಿತು. ಅಂದಿನಿಂದ ಏನನ್ನೂ ತಿನ್ನುವುದಿಲ್ಲವೆಂದು ಪ್ರತಿಜ್ಞೆ ಮಾಡಿದಳು. ಪತಿಯ ಎದುರಿನಲ್ಲೇ ಈ ರೀತಿ ಯಾದ ಮೇಲೆ, ಬೇರೆ ಎಲ್ಲಿ ಹೋಗಿ ಹೇಳಿಕೊಳ್ಳಬಲ್ಲಳು? "ಪತಿ

ಪುತ್ರರಿಲ್ಲದ ಸ್ತ್ರೀಯರು ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುವುದೇ ಇಲ್ಲವೇ? ಅತ್ತೆಯ ಬಳಿ ಹೋಗಬಾರದೇಕೆ? ಅವರೂ ಕೂಡಾ ಒಬ್ಬರೇ ಇದ್ದಾರೆ ಆದರೆ ಅಲ್ಲಿಗೆ ಹೋದರೆ ಏನೇನು ಮಾತು ಬರುತ್ತದೋ. ಇದು ನನ್ನ ಮನೆಯಲ್ಲ. ನಾನೊಬ್ಬ ಕೂಲಿಯವಳಂತಿದ್ದೇನಷ್ಟೆ. ಮನೆಯವರು ಮನಸ್ಸು ಮಾಡಿದರೆ, ಹೊಟ್ಟೆಗೆ ಕೊಡಬಹುದು, ಇಲ್ಲವಾದರೆ ಇಲ್ಲ." ಈ ರೀತಿ ಯೋಚಿಸಿ, ರಮೆಯು ನಿರ್ಲಿಪ್ತಳಾಗಿ ಮನೆಯ ಕೆಲಸಗಳನ್ನು ಮಾಡತೊಡಗಿದಳು. ಎಷ್ಟು ಯೋಚಿಸಿದರೂ ದುಃಖವೇ ವಿನಹ ಚಿತ್ತಶಾಂತಿಯಿಲ್ಲ. ಮಾಯೆಯು ದೂರವಾದರೆ ಚಿಂತೆಯು ದೊರವಾಗುವುದು. "ನನ್ನ ಮಾವನವರು ನಮ್ಮ ಅತ್ತೆಯನ್ನು ತ್ಯಜಿಸಿ, ಎರಡನೇ ಮದುವೆ ಮಾಡಿಕೊಳ್ಳಲಿಲ್ಲವೇ? ಅತ್ತೆಯು ಅದರಿಂದ ಸತ್ತೇ ಹೋದರೇ?"

ಚಂದ್ರಮತಿಯಲ್ಲಿ ಏನೇ ದುರ್ಗುಣವಿದ್ದರೂ ಅವಳು ಬಹಳ ಮಿತವ್ಯಯಿಯಾಗಿದ್ದಳು. ಪ್ರಭಾಕರನು ಕೆಲಸದಲ್ಲಿ ಉನ್ನತಿಯನ್ನು ಹೊಂದುತ್ತಿದ್ದನು. 4-5 ವರ್ಷಗಳಲ್ಲೇ ಮೂರು ಸಾವಿರ ರೂಪಾಯಿಗಳು ಬ್ಯಾಂಕಿನಲ್ಲಿ ಸಂಗ್ರಹವಾದುವು. ಆಗ ಅಲ್ಲೇ ಒಂದು ಮನೆಯನ್ನು ಕಟ್ಟಬೇಕೆಂದು ಅವನಿಗೆ ಮನಸ್ಸಾಯಿತು. ಚಂದ್ರಮತಿಗೂ ಸಂತೋಷವಾಯಿತು—ಊರಿನಲ್ಲಿ ಕಟ್ಟದೇ ಇಲ್ಲೇ ಕಟ್ಟುವನಲ್ಲ- ಎಂದು. ಮನೆಯನ್ನು ಕಟ್ಟುವ ಕೆಲಸ ಪ್ರಾರಂಭವಾಯಿತು.

ನೂತನ ಗೃಹ ಪ್ರವೇಶದ ದಿನ ಪ್ರಭಾಕರನು ಮಿತ್ರರಿಗೆಲ್ಲ ಔತಣ ಮಾಡಿಸಿದನು. ಆ ದಿನ ಅವನ ಸಂತೋಷಕ್ಕೆ ಪಾರವೇ ಇಲ್ಲ. ಅವನು ಆ ಮನೆಯನ್ನು ಚಂದ್ರಮತಿಯ ಹೆಸರಿಗೆ ಬರೆದು ಕೊಟ್ಟುಬಿಡಬೇಕೆಂದು ಆಲೋಚಿಸಿದನು. ಇದು ಹೇಗೋ ರಮೆಗೆ ತಿಳಿಯಿತು. ಮನೆಯ ವಿಷಯದಲ್ಲಿ ಬಾಯನ್ನು ತೆರೆಯಲೇಬಾರದೆಂದು ಮನಸ್ಸು ಮಾಡಿದ್ದರೂ, ಅದು ಸುಮ್ಮನಿರಲಿಲ್ಲ. ಒಂದು ದಿನ ಪತಿಯೊಡನೆ "ಮನೆಯನ್ನು ಅವರ ಹೆಸರಿಗೆ ಬರೆದು ಬಿಟ್ಟಿರಾ"? ಎಂದು ಕೇಳಿದಳು.

ಪ್ರಭಾಕರ—"ಹೌದು, ಬರೆದು ಬಿಟ್ಟೆ, ಏನಂತೆ. ಅವಳೇನು ಬೇರೆಯೇ. ಅದನ್ನೂ ಸಹಿಸಲಾರೆಯಾ?"

"ಹೋಗಲಿ ಬಿಡಿ, ತಪ್ಪಾಯಿತು, ಕ್ಷಮಿಸಿರಿ".

ಚಂದ್ರಮತಿಯು ಇದೆಲ್ಲವನ್ನೂ ಕೇಳಿ ಹತ್ತಿರ ಬಂದು "ಮಗನೇ, ನಾನು ಹೇಳ್ತಾನೇ ಇರಲಿಲ್ಲವೇ—ನನ್ನ ಹೆಸರಿಗೆ ಬೇಡಾ ಅಂತ. ನೋಡು ನಾನು ಹೇಳಿದ್ದೇ ಬಂತು. ನನಗೇನೋ ನಿನಗೂ ನನಗೂ ಅಂತರ ಎಂಬುದೇ ತಿಳಿದಿರಲಿಲ್ಲ" ಎಂದು ಅಳಹತ್ತಿದಳು.

ಪ್ರಭಾಕರ—"ಯಾರೇನಾದರೂ ಹೇಳಲಿ, ಬಿಡಮ್ಮ; ನನ್ನ ಹಣ, ನನ್ನ ಮನಸ್ಸು, ಉಳಿದವರಿಗೇನು?"

ರಮೆಯು ಸುಮ್ಮನಾದಳು.

— ೬ —

ರಮೆಗೊಂದು ಗಂಡು ಮಗುವಾಗಿದೆ. ಇನ್ನೂ ಆರುದಿನ. ಪ್ರಸವ ಗೃಹದಲ್ಲೇ ಇದ್ದಾಳೆ.

ಪ್ರಭಾಕರನು ಊಟ ಮಾಡಿ ನಿದ್ದೆ ಹೋದನು. ಚಂದ್ರಮತಿಯು ಅವನ ಕೋಣೆಯಲ್ಲಿಯೇ ಕುಳಿತು ಏನೋ ಯೋಚಿಸುತ್ತಿದ್ದಳು. ಅವಳ ತಮ್ಮನೂ ಆ ದಿನ ಊರಿಂದ ಬಂದಿದ್ದನು.

ಚಂದ್ರಮತಿಯು ಪ್ರಭಾಕರನ ಮುಖವನ್ನು ನೋಡಿದಳು. ಅವನ ಎದೆಯ ಮೇಲೆ ಕೈ ಇಟ್ಟು ನೋಡಿದಳು. ನಂತರ ನಾಡಿಯನ್ನೂ ನೋಡಿದಳು. ಆದುವರೆಗೆ ಕೋಣೆಯಲ್ಲಿದ್ದ ವಸ್ತುಗಳನ್ನೆಲ್ಲಾ ಒಂದು ಕಡೆ ಸೇರಿಸಿ, ಗಾಡಿಯನ್ನು ತರಲು ತಮ್ಮನಿಗೆ ಹೇಳಿದಳು. ನೋಡುತ್ತಿದ್ದಂತೆಯೇ ಮನೆಯಲ್ಲಿದ್ದ ಎಲ್ಲ ಸಾಮಾನು ಗಂಟುಕಟ್ಟಿ ಗಾಡಿಯಲ್ಲಿಟ್ಟಳು. ಮನೆಯಲ್ಲಿ ಉಪಯೋಗಕ್ಕೆ ಬರುವ ವಸ್ತು ಒಂದೂ ಇಲ್ಲದಂತಾಗಲು, ಅವಳು ಈ ರೀತಿ ಕಿರಿಚಿಕೊಳ್ಳಲಾರಂಭಿಸಿದಳು— "ಅಯ್ಯಯ್ಯೋ! ಅಯ್ಯೋ, ದೇವರೇ, ಏನಾಗಿ ಹೋಯಿತಪ್ಪ ನನ್ನ ಮಗನಿಗೆ! ಇದುವರೆಗೂ ಚೆನ್ನಾಗಿತ್ತಲ್ಲ ಅಯ್ಯೋ, ದೇವರೇ! ಇನ್ನು ನನಗೆ ಗತಿಯಾರು? ಅಯ್ಯೋ, ಮಗನೇ!"

ರಮೆಯು ಘಾಬರಿಯಾಗಿ ಹೊರಕ್ಕೆ ಬಂದು "ಏನದು" ಎಂದು ಕೇಳಿದಳು

ಚಂದ್ರಮತಿ—"ಏನು ಹೇಳಲೀ! ಮಗಳೇ, ನನ್ನ ಮಗ ನನ್ನನ್ನೂ

ಬಿಟ್ಟುಹೋದನಲ್ಲೇ! ಈಗ ತಾನೆ ನನ್ನ ಕೂಡ ಮಾತನಾಡುತ್ತಾ ಇದ್ನಲ್ಲೋ. ದೇವರೇ! ನೀರು ಕೇಳಿದ. ತಗೊಂಡು ಹೋಗೋದರಲ್ಲಿ ಕಣ್ಣು ತೇಲಿಸಿ ಬಿಟ್ಬಿದ್ನಲ್ಲೋ ದೇವರೇ, ಅಯ್ಯೋ, ಇನ್ನೇನ್ಗತಿಯಪ್ಪಾ ನನಗೆ!''

ರಮೆಯು ಪತಿಯ ಮಂಚದ ಬಳಿ ಹೋಗಿ ಮುಖವನ್ನು ನೋಡಿ ಹೀಗೆಂದು ರೋದಿಸಿದಳು – ''ಅಯ್ಯೋ, ಯಾವ ದ್ವೇಷತೀರಿಸಿ ಕೊಂಡೆಯೋ ನೀನು? ನನ್ನ ಮೇಲೆ ಸ್ವಲ್ಪವಾದರೂ ದಯಬೇಡವೇ ಈಗ ತಾನೇ ನಿನ್ನ ಸಂಗಡ ಮಾತನಾಡ್ತಾ ಇದ್ದರಲ್ಲೇ, ಇಷ್ಟು ಬೇಗ ಯಾರಾದ್ರೂ ಸಾಯ್ತಾರೇ?''

ಅಕ್ಕಪಕ್ಕದವರು ರೋದನಧ್ವನಿಯನ್ನು ಕೇಳಿ ಬಂದರು. ಹೃದಯ ಸ್ತಂಭನದಿಂದ ಮರಣವುಂಟಾಗಿರಬಹುದೆಂದು ಎಲ್ಲರೂ ಊಹಿಸಿದರು. ದಹನಕ್ರಿಯೆಗೆ ಸಿದ್ಧವಾಯಿತು.

ಚಂದ್ರಮತಿ—''ರಮಾ, ಏನೋ ಆಗಬಾರದ್ದು ಆಗಿಹೋಯಿತು ನೀನೂ ಅನಾಥಳಾದೆ ನಿನ್ನ ಬಳಿ ಏನಾದರೂ ಹಣವಿದ್ದರೆ ಕೊಡು ಅಂತ್ಯಕ್ರಿಯೆಗೆ.''

ರಮೆ—(ಅಳುತ್ತ) ''ಅಮ್ಮಾ, ನನಗೊಂದು ಕಾಸನ್ನೂ ನೀವು ಕೊಡ್ತಾ ಇರಲಿಲ್ಲ. ಎಲ್ಲಿಂದ ಬರಬೇಕು ಅವರು ಸಂಪಾದಿಸಿದ್ದೆಲ್ಲ ನಿಮಗೇ ತಂದುಕೊಡ್ತಿರಲಿಲ್ಲವೇ?''

ಚಂದ್ರ— ''ಅಯ್ಯೋ, ಪಾತಕಿ, ಒಡವೇನಾದ್ರೂ ಕೊಡೇ, ಇನ್ನೇನ್ಮಾಡಿಕೊಳ್ತೀಯೇ ಅದನ್ನು!''

''ಅವರ ದಹನಕ್ಕೂ ಇಲ್ಲದಷ್ಟು ಬಡತನವೇ ಮನೆಯಲ್ಲಿ? ಮನೆಯ ಐಶ್ವರ್ಯವೆಲ್ಲವನ್ನೂ ಅವರೇ ತೆಗೆದುಕೊಂಡು ಹೋದರೇ?''

''ನಿನ್ನ ಸಂಗಡ ನಂಗೇಕೇ ಚರ್ಚೆ! ಮನೇಲಿರೋದೆಲ್ಲ ನಂದು. ನಾನು ಬರುವಾಗ ಸಾವಿರಾರು ರೂಪಾಯಿ ತಂದಿದ್ದೆ ಎಲ್ಲಾ ಸ್ವಾಹಾ ಆಗಿಹೋಯಿತು ನಾನೂ ನನ್ನ ಮಕ್ಕಳೂ ಅನ್ನವಿಲ್ಲದೆ ಸಾಯ ಬೇಕೂಂತ್ಲೋ ನಿನ್ನ ಮನಸ್ಸಿನಲ್ಲಿ''.

''ಹಾಗಾದ್ರೆ ಇವರ್ಯಾರು, ನಿನ್ನ ಮಗನೇ ಅಲ್ಲವೇ? ಸತ್ತಕೂಡಲೆ ಸಂಬಂಧ ಕಡಿದು ಹೋಯಿತೆ?''

"ಗಂಡನ ಶವ ಮನೇಲಿ ಬಿದ್ದಿರುವಾಗ ಈ ರೀತಿ ಕಾದಲು ನಿನಗೆ ನಾಚಿಕೆ ಇಲ್ಲವೇನೇ! ಗಂಡ ಸತ್ತನೋ ಇಲ್ಲವೋ, ಗೂಳಿಯಾಗಿ ಬಿಟ್ಟೆಯಲ್ಲೇ!".

"ಅವರಿಂದ ನನಗೆ ದೊರೆತ ಸುಖವಾದರೂ ಏನು? ಅವರು ನನಗೆ ಒಂದೇ ಒಂದು ಕಾಸನ್ನೂ ಕೊಡಲಿಲ್ಲ ನಿನ್ನ ಸುಖಕ್ಕಾಗೇ ಅವರು ಹಗಲೂ ರಾತ್ರಿ ಸಾಯ್ತಾ ಇದ್ದುದು. ಅವರು ನನಗೆ ಮೊದಲೇ ಹೇಳಿದ್ರು ನಾನು ವಿಧವೆಯೆಂದು".

"ಹಾಗಾದರೆ ಒಡವೆ ಕೊಡೋದಿಲ್ಲವೇನೇ ನೀನು"-

"ಖಂಡಿತ ಇಲ್ಲ".

ಚಂದ್ರಮತಿಯು ಹಲ್ಲನ್ನು ಕಡಿಯುತ್ತ ಅವರಿವರಲ್ಲಿ ಸಾಲ ಕೇಳಲು ಹೊರಟಳು. ಇಂತಹ ನೀಚ ಹೆಂಗಸು ಏನನ್ನು ತಾನೇ ಮಾಡಲಾರಳು? ಅದನ್ನು ನೋಡಿ ತನ್ನ ಸಮಸ್ತ ಒಡವೆಗಳನ್ನೂ ತಂದು ಅತ್ತೆಯ ಮುಂದೆ ಬಿಸಾಡಿಬಿಟ್ಟಳು.

ಪ್ರಭಾಕರನು ಸತ್ತು ಏಳು ತಿಂಗಳಾಯಿತು ಚಂದ್ರಮತಿಯು ತನ್ನ ಮಕ್ಕಳೊಡನೆ ತವರೂರಿಗೆ ಹೋಗಿದ್ದಾಳೆ. ಮನೆಯಲ್ಲಿ ರಮೆಯೊಬ್ಬಳೇ. ಕೂಲಿಗೆ ಕೆಲಸ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾಳೆ. ಪ್ರಭಾಕರನ ಸ್ವಂತ ತಾಯಿಯು ಮಗನ ಮರಣವಾರ್ತೆ ಕೇಳಿ ಮೃತಪಟ್ಟಳು. ರಮೆಗೆ 7 ತಿಂಗಳ ಮಗುವಿನ ಹೊರತು ಯಾರೂ ಇಲ್ಲ.

ಒಂದು ದಿನ ಪಕ್ಕದ ಮನೆಯ ಸಾಹುಕಾರನೊಬ್ಬನು ಬಂದು ಬಾಡಿಗೆ ಕೇಳಿದನು. ರಮೆಯು ಹೆದರಿ, "ಬಾಡಿಗೆ ಯಾವುದು?" ಎಂದು ಕೇಳಿದಳು.

"6 ತಿಂಗಳ 150 ರೂ. ಬಾಕಿ ಬರಬೇಕು"

"ಮನೆ ನನ್ನದು ನನ್ನ ಪತಿ ಕಟ್ಟಿಸಿದ್ದುದು ನಿನಗೆ ತಿಳಿಯದೇ?"

"ಗೊತ್ತು ಆದರೆ ಮನೆ ಚಂದ್ರಮತಿಗೆ ಆಗಿ ಅವಳು ಇದನ್ನು 5 ಸಾವಿರಕ್ಕೆ ಮಾರಿದಳು"

"ಅವಳಿಗೇನು ಅಧಿಕಾರ ಮಾರಲು?"

"ಅಧಿಕಾರವಿಲ್ಲದಿದ್ದರೆ ಹೇಗೆ ಮಾರ್ತಾ ಇದ್ದಾಳು?"

"ಮೊದಲನೆ ತಿಂಗಳೇ ನೀವು ಯಾಕೆ ತಿಳಿಸಲಿಲ್ಲ?"

"ನಿಮಗೇ ತಿಳಿದಿರಬಹುದೂ ಎಂದು ತಿಳಿದಿದ್ದೆ. ವ್ಯಸನದಲ್ಲಿ ತಗಾಡೆ ಮಾಡಬಾರದೂ ಎಂದು ಸುಮ್ಮಗಿದ್ದೆ".

"ನನ್ನ ಬಳಿ ಒಂದು ಕಾಸೂ ಇಲ್ಲ"

"ದಾವಾ ಮಾಡ್ತೀನಿ. ಕೋರ್ಟುವೆಚ್ಚ ನಿಮ್ಮ ಮೇಲೆ ಬೀಳುತ್ತದೆ"

"ಏನು ಬೇಕಾದ್ರೂ ಮಾಡಿ."

ದಾವಾ ಆಗಿ, ಡಿಕ್ರಿ ಆಯಿತು. 150 ಇದ್ದದು 200 ರೂಪಾಯಿ ಆಯಿತು ಮನೆ ಸಾಹುಕಾರನಿಗೆ ಸೇರಿಹೋಯಿತು.

---

## ೧೧ ಬಂಧನ

ಬಾಲಕನು ಮಂಚದ ಮೇಲೆ ರೋಗದಿಂದ ನರಳುತ್ತಿದ್ದಾನೆ. ರಾಜಕುಮಾರಿಯು ತಲೆಯ ಹತ್ತಿರ ಕುಳಿತಿದ್ದಾಳೆ ವಿಜಯಸಿಂಹನು ಎದುರಿಗೆ ನಿಂತು ಅಶ್ರುಪೂರಿತ ನೇತ್ರಗಳಿಂದ ಮಗುವನ್ನು ನೋಡುತ್ತಿದ್ದಾನೆ. ಒಬ್ಬನೇ ಮಗ, 8 ದಿನಗಳಿಂದಲೂ ಕಣ್ಣನ್ನು ತೆರೆದೇ ಇಲ್ಲ. ಹಳ್ಳಿಯಲ್ಲಿ ಏನೇನು ಮಾಡಬೇಕೋ ಎಲ್ಲವನ್ನೂ ಮಾಡಿ ಸೋತರು.

ವಿಜಯ—ನಾವು ಇಷ್ಟು ಸುಖದಿಂದಿರುವುದನ್ನು ಕೂಡ ದೇವರು ನೋಡಲಾರದೆ ಹೋದನೇ! ಕೂಲಿಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತೇವೆ. ದುರ್ಬಲರಿಗೆ ದೇವರ ಬಳಿ ಸಹ ರಕ್ಷಣೆ ಇಲ್ಲವೇ?

ರಾಜಕುಮಾರಿ- ಹೋಗಿ ಯಾರಾದರೂ ಒಬ್ಬ ಡಾಕ್ಟರರನ್ನಾದರೂ ಕರೆದುಕೊಂಡು ಬನ್ನಿ. ಹಣೇಲಿ ಬರೆದಂತಾಗಲಿ

ವಿಜಯಸಿಂಹನು ಹೊರಡುವುದರಲ್ಲಿದ್ದಾಗ, ಯಾರೋ ಹೊರಗಿಂದ ಬಂದು "ಹೊರಗಡೆ ಪೋಲೀಸಿನವರು ಬಂದಿದ್ದಾರೆ. ಜಮೇದಾರರು ನಿಮ್ಮನ್ನು ಕರೆಯುತ್ತಿದ್ದಾರೆ" ಎಂದು ಹೇಳಿದನು.

ವಿಜಯಸಿಂಹನು ಘಾಬರಿಯಿಂದ ಹೊರಗೆ ಬಂದು ನೋಡಲು, ಜಮೇದಾರರು ವಾರಂಟನ್ನು ಹಿಡಿದು ನಿಂತಿದ್ದಾರೆ. ಮೋಟಾರು ಕಾರು ಸಹಾ ಸಿದ್ಧವಾಗಿದೆ

ವಿಜಯಸಿಂಹನು ಬಡವನಾಗಿದ್ದರೂ, ಧೈರ್ಯಶಾಲಿಯಾಗಿದ್ದ ರಾಷ್ಟ್ರೀಯ ಚಳವಳಿ ಎಂದರೆ ಬಹಳ ಆಸಕ್ತಿ. ಅವನ ಪತ್ನಿಯೂ ಅವ

ನೊಡನೆ ಸಹಕರಿಸುತ್ತಿದ್ದಾಳೆ. ಊರಿನವರು ಮತ್ತು ಅಕ್ಕಪಕ್ಕದ ಹಳ್ಳಿಯವರೆಲ್ಲರು ವಿಜಯಸಿಂಹನು ಹೇಳಿದಂತೆ ಕೇಳುತ್ತಾರೆ

ಜಮಾದಾರ್ (ವಾರಂಟನ್ನು ತೋರಿಸುತ್ತ) ಬೇಗ ಹೊರಡಿ ಸ್ವಾಮಿ, ಇನ್ನೂ ಅನೇಕ ಕಡೆ ಹೋಗಬೇಕಾಗಿದೆ.

ವಿಜಯಸಿಂಹ—(ದೀನಭಾವದಿಂದ) ನಾನೇನೋ ಹೊರಡಲು ಸಿದ್ಧನಾಗೇ ಇದ್ದೇನೆ ಆದರೆ ನನ್ನ ಮಗನು ಅನೇಕ ದಿನಗಳಿಂದ ರೋಗದಿಂದ ನರಳುತ್ತಿದ್ದಾನೆ ಸ್ವಲ್ಪ ತಡಿಯಿರಿ.

ಜಮಾದಾರ್—(ನಗುತ್ತ) ಒಂದು ಕ್ಷಮೆ ಬೇಡಿಕೊಳ್ಳಿ, ಯಾವ ತಂಟೆಯೂ ಇಲ್ಲದಂತಾಗುವುದಲ್ಲ. ಮಕ್ಕಳು ಮರಿಗಳಿಗಾಗಿ ತಾನೇ ಮನುಷ್ಯನು ದುಡಿಯುವುದು. ನಾನು ಸರ್ಕಾರಿ ನೌಕರನಾದರೂ ಮನುಷ್ಯ ತಾನೆ! ಇದೇ ನಾನು ನಿಮಗೆ ಕೊಡುವ ಸಲಹೆ!

ವಿಜಯಸಿಂಹನು ಸ್ವಲ್ಪ ಹೊತ್ತು ಯೋಚಿಸಿ ಹೇಳಿದ:—

"ಮಗು ಬದುಕಲಿ. ಸಾಯಲಿ, ನಾನು ಕ್ಷಮೆ ಬೇಡುವುದು ಅಸಂಭವ. ಯಾತಕ್ಕಾಗಿ ಕ್ಷಮೆ ಬೇಡಲಿ? ನಾನು ಮಾಡಿರುವ ಅಪರಾಧವಾದರೂ ಏನು? ನನ್ನ ದೇಶಕ್ಕೆ ಸ್ವರಾಜ್ಯವನ್ನು ಬೇಡುವುದು ಅಪರಾಧವೇನೂ ಅಲ್ಲ. ಸ್ವಲ್ಪ ನಿಧಾನಿಸಿ ಎಂದಿಷ್ಟೇ ಕೇಳಿಕೊಳ್ಳೋದು".

— ೨ —

ವಿಜಯಸಿಂಹನು ಒಳಗೆ ಹೋಗಿ "ಬಂದೇ ಬಿಟ್ಟಿದೆ ವಾರಂಟು. ಆ ದುಷ್ಟ ಒಪ್ಪುವುದಿಲ್ಲ. ಹೊರಟೇ ಬಿಡುತ್ತೇನೆ ದೇವರ ಹೆಸರಿನಲ್ಲಿ. ಆದರೆ ಮಗುವನ್ನು ಬಿಟ್ಟು ಹೋಗಲು ಮನಸ್ಸಿಲ್ಲ ದೇವರೇ ಗತಿ" ಎಂದ.

ರಾಜಕುಮಾರಿ—(ಅಳುತ್ತಾ) "ಹೇಗೂ ಹೋಗಲೇ ಬೇಕಾಗಿತ್ತು, ಹೋಗಿಬನ್ನಿ. ದೇವರೇ ಮಗುವನ್ನು ರಕ್ಷಿಸಲಿ ನನ್ನಿಂದ ಸಾಧ್ಯವಾದುದನ್ನೆಲ್ಲಾ ಮಾಡುವೆನು, ನೀವು ಚಿಂತೆ ಮಾಡಬೇಡಿ".

ವಿಜಯಸಿಂಹನು ಬಟ್ಟೆಗಳನ್ನು ತೆಗೆದುಕೊಂಡು, ಮಗುವಿನ ಬಳಿ ಬಂದು ನಿಂತ. ಮನಸ್ಸು ದುರ್ಬಲವಾಗುತ್ತಿತ್ತು.

ಜಮಾದಾರ್—"ಹೊತ್ತಾಯ್ತು ಸ್ವಾಮಿ, ಬೇಗ ಹೊರಡಿ".

ವಿಜಯಸಿಂಹ—(ಹೊರಗೆ ಬಂದು) "ಜಮಾದಾರರೇ, ಈಗ ನಾನು ಮರಣೋನ್ಮುಖನಾಗಿರುವ ಮಗುವನ್ನು ಬಿಟ್ಟು ಬರ

ಲಾರೆ. ಒಂದು ಸಾರಿ ನೋಡಿ ಬರ್ತೀನೆ. ನಂತರ ಈಶ್ವರೇಚ್ಛೆಯಿ ದ್ದಂತಾಗಲಿ"!

ಜಮಾದಾರನಿಗೆ ಕರುಣೆ ಹುಟ್ಟಿತು. ಹೋಗಲವಕಾಶವಿತ್ತನು. ವಿಜಯಸಿಂಹನು ಒಳಗೆ ಹೋಗಿ ಮಗುವಿನ ಬಳಿ ನಿಂತ ಅದನ್ನು ನೋಡಿ ತನ್ನ ಪತಿಯು ಮೋಹಕ್ಕೆ ಸಿಕ್ಕಿಬಿದ್ದು ತನ್ನ ಧರ್ಮವನ್ನೂ ತ್ಯಜಿಸುತ್ತಿರುವನೆಂದು ರಾಜಕುಮಾರಿಯು ಊಹಿಸಿ ಪತಿಯೊಡನೆ "ಹೀಗೇಕೆ ಸಲ ಸಲಕ್ಕೂ ಬರುತ್ತಿರುವಿರಿ? ಮನಸ್ಸನ್ನು ಗಟ್ಟಿ ಮಾಡಿ, ದೇವರ ಹೆಸರನ್ನು ಹೇಳಿ ಹೊರಟು ಹೋಗಿಬಿಡಿ'' ಎಂದು ಹೇಳಿದಳು. ವಿಜಯ ಸಿಂಹನು "ಏನು ಮಾಡಲಿ? ಹೃದಯವು ಚೂರು ಚೂರಾಗುತ್ತಿದೆ. ಮಗವನ್ನು ಈ ಸ್ಥಿತಿಯಲ್ಲಿ ಬಿಟ್ಟು ಹೇಗೆ ಹೊರಡಲಿ. ನಾಳೆ ಬರ್ತೀನೀಂತ ಹೇಳಿಬಿಡಲೆ ಎನ್ನಿಸುತ್ತಿದೆ. ಭಗವಂತನು ಏನು ಮಾಡುವನೋ ಕಾಣೆ" ಎಂದು ಗಟ್ಟಿಯಾಗಿ ಅಳಲಾರಂಭಿಸಿದ.

"ಕ್ಷಮಾಪಣೆ ಕೇಳಿಕೊಳ್ಳಬೇಕೆಂಬ ಮನಸ್ಸೇನಾದರೂ ಇದೆಯೇ?"

"ಕ್ಷಮೆ ಏಕೆ ಬೇಡಲಿ? ನನ್ನ ಮನಸ್ಸಿನಲ್ಲಿ ಈಗ ಏನಾಗುತ್ತಿದೆ ಎಂಬುದನ್ನು ನೀನು ಬಲ್ಲೆಯಾ?"

ಹೊರಗಡೆಯಿಂದ "ಎಷ್ಟು ಹೊತ್ತೀ, ಹೊರಡಿ ಬೇಗ".

ರಾಜಕುಮಾರಿ—"ನೀವು ವ್ಯರ್ಥವಾಗಿ ಹಿಂದೆಮುಂದೆ ನೋಡ್ತಿರುವಿರಲ್ಲ. ಕ್ಷಮೆ ಬೇಡುವ ಮನಸ್ಸಿಲ್ಲದಿದ್ದರೆ, ಮೋಹಕ್ಕೆ ಸಿಕ್ಕಿ ಏಕೆ ವಿಳಂಬ ಮಾಡುತ್ತಿರುವಿರಿ? ಜನರೇನಂದುಕೊಳ್ಳುವರು? ಮೊದಮೊದಲು ಬಹಳ ಕುಣಿಯುತ್ತ ಇದ್ದರು ಹೊರಡುವ ಸಮಯ ಬಂದಾಗ, ಹಿಂದೆ ಮುಂದೆ ನೋಡ್ತಾರೆ ಎಂದುಕೊಳ್ಳುವುದಿಲ್ಲವೇ? ಮಗುವನ್ನು ನೀವು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವಿರಿ ಎಂಬುದನ್ನು ನಾನು ಕಾಣೆನೇ? ಆದರೆ ಧರ್ಮದ ಮುಂದೆ ಪ್ರೇಮವೇ? ನೀವೇ ಹೀಗೆ ಮನಸ್ಸನ್ನು ಇಳಿಯ ಬಿಟ್ಟರೆ, ನನ್ನಂತಹ ದುರ್ಬಲ ಮನಸ್ಸಿನ ಸ್ತ್ರೀಯ ಗತಿ ಏನು? ನಮ್ಮವರೇ ಆದ ತಾಯಂದಿರು, ಅಕ್ಕತಂಗಿಯರು, ಕರ್ತವ್ಯಕ್ಕಾಗಿ ನಗುತ್ತ ತಮ್ಮ ಪ್ರಾಣವನ್ನರ್ಪಿಸಿಲ್ಲವೇ? ಆ ದೇವಿಯರ ಮಕ್ಕಳಾದ ನಾವು ಕರ್ತವ್ಯಭ್ರಷ್ಟರಾಗುವುದು ಎಂತಹ ನಾಚಿಕೆಗೇಡಿನ ವಿಷಯ!"

ರಾಜಕುಮಾರಿಯ ಮುಖದಲ್ಲಿ ವೀರಾಂಗನೆಯರ ಸ್ಮರಣೆಯು, ಗೌರವವು ತುಂಬಿತ್ತು. ಅದನ್ನು ನೋಡಿ ವಿಜಯಸಿಂಹನ ದೌರ್ಬಲ್ಯವೆಲ್ಲವೂ ಮಾಯವಾಗಿ ಹೋಯಿತು. ಮಗುವಿನ ಮುಖವನ್ನು ಚುಂಬಿಸಿ, ಪತ್ನಿಯನ್ನು ಅಪ್ಪಿಕೊಂಡು, ಮನೆಯಿಂದ ಹೊರಟ. ರಾಜಕುಮಾರಿಯು ಸಜಲ ನೇತ್ರಗಳುಳ್ಳವಳಾಗಿ "ಭಗವಂತನು ನಿಮಗೆ ಆತ್ಮಬಲವನ್ನು ಕೊಡಲಿ! ನೀವು ವಿಜಯಿಗಳಾಗಿ, ಬೇಗ ಹಿಂತಿರುಗಿ ಬನ್ನಿ" ಎಂದಳು.

ವಿಜಯ— "ನಿನ್ನ ವರದಾನವನ್ನು ಪಡೆದ ನನಗೆ ಯಾವ ಚಿಂತೆಯೂ ಇಲ್ಲ. ನಿನ್ನಂತಹ ದೇವಿಯರು ಭಾರತ ಮಾತೆಯ ಗರ್ಭದಲ್ಲಿ ಸದಾ ಜನಿಸುತ್ತಿರಲಿ!"

ವಿಜಯಸಿಂಹ ಹೋದ ನಾಲ್ಕು ದಿನಗಳ ನಂತರ ಉದಯನು ಕಣ್ಣು ಬಿಟ್ಟು ನೀರನ್ನು ಕೇಳಿದನು. ನೀರನ್ನು ಕುಡಿದು "ಅಮ್ಮಾ, ಅಪ್ಪ ಎಲ್ಲಿ? ಕರೆ" ಎಂದನು.

ತಾಯಿ—"ಅವರು ಹೊರಗೆ ಹೋಗಿದ್ದಾರೆ. ಬೇಗಬರ್ತಾರೆ!"

ಒಬ್ಬನು ಬಂದು "ಅಮ್ಮ, ವಿಜಯಸಿಂಹರಂತೂ ಹೊರಟು ಹೋದರು. ಈಗ ನೀವೇ ಬಂದು ನಮಗೆ ಸಹಾಯಮಾಡಿ. ನಾಳೆ ರೈತರ ಸಭೆ ಇದೆ" ಎಂದ.

ರಾಜಕುಮಾರಿ—"ನಾನೀಗ ಬರಲಾರೆನಪ್ಪ. ಇಲ್ಲಿ ನೋಡಿ ಮಗುವು ಹಾಸಿಗೆ ಹಿಡಿದಿದೆ; ಇವತ್ತು ಮಾತ್ರ ಕಣ್ಣು ಬಿಟ್ಟಿದೆ. ಇದನ್ನು ಕರೆದುಕೊಂಡಂತೂ ಬರಲಾರೆ."

ಬಂದವನು—"ನೀವು ಬರದೇ ಇದ್ದರೆ, ನಮ್ಮ ಕೆಲಸವೆಲ್ಲ ಹಾಳಾಗಿಬಿಡುವುದು."

ರಾಜಕುಮಾರಿ (ನಿರುಪಾಯಳಾಗಿ) "ಹಾಗಾದರೆ ಬರ್ತೀನಿ, ದೇವರಿಚ್ಛೆಯಿದ್ದಂತಾಗಲಿ. ಕರ್ತವ್ಯದಿಂದ ದೂರವಾಗಲಾರೆ"

ಮಾರನೆದಿನ ರಾಜಕುಮಾರಿಯು ಮಗುವನ್ನು ಡೋಲಿಯಲ್ಲಿ ಕರೆದುಕೊಂಡು ಸಭೆಗೆ ಹೋದಳು. ಅಲ್ಲಿ ಒಂದು ಮನೆಯಲ್ಲಿ ಮಗುವನ್ನು ಮಲಗಿಸಿ ತಾನು ಸಭೆಗೆ ಹೋದಳು. ಸಭೆಯು ಮುಗಿದ ನಂತರ

ಯಾರೋ ಬಂದು ತಮ್ಮ ಊರಿನಲ್ಲಿ, ವಿದೇಶೀ ವಸ್ತ್ರಗಳನ್ನು ಮಾರುತ್ತಿರುವರೆಂದೂ ಎಷ್ಟು ಹೇಳಿದರೂ ಕೇಳುವುದಿಲ್ಲವೆಂದೂ, ಬಂದು ಹೇಳಬೇಕೆಂದೂ ಪ್ರಾರ್ಥಿಸಿಕೊಂಡರು. ರಾಜಕುಮಾರಿಯು ವಿವಶಳಾಗಿ ಮಾರನೇದಿನ ಆ ಗ್ರಾಮಕ್ಕೆ ಹೋಗಬೇಕಾಗಿ ಬಂತು. ನಿತ್ಯವೂ ಇದೇ ರೀತಿ ಒಂದೊಂದು ಗ್ರಾಮಕ್ಕೆ ಹೋಗಲೇ ಬೇಕಾಯಿತು. ಪತಿಯು ಅರ್ಧ ಮಾಡಿಟ್ಟ ಕೆಲಸವನ್ನು ಪೂರ್ತಿಮಾಡುವುದೇ ತನ್ನ ಧರ್ಮವೆಂದು ತಿಳಿದಳು. ತಾನು ಹೋದ ಕಡೆಯಲ್ಲೆಲ್ಲಾ ರೋಗದಿಂದ ನರಳುತ್ತ ಇದ್ದ ಉದಯುನನ್ನೂ ಕರೆದುಕೊಂಡು ಹೋಗುತ್ತಿದ್ದಳು.

— ೩ —

ಬೆಳಿಗ್ಯೆ ಎಂಟು ಗಂಟೆಯಾಗಿದೆ. ರಾಜಕುಮಾರಿಯು ಉದಯುನಿಗೆ ಹಾಲನ್ನು ಕಾಯಿಸುತ್ತಿರುವಾಗ ಒಬ್ಬ ಸ್ವಯಂಸೇವಕನು ಬಂದು "ಅಮ್ಮಾ ಪೊಲೀಸರು ನಿಮಗೆ ವಾರಂಟ್ ತಂದಿರುವರು" ಎಂದು ಹೇಳಿದನು.

ರಾಜಕುಮಾರಿಯು ಮಗುವಿಗೆ ಹಾಲನ್ನು ಕುಡಿಸುತ್ತಾ "ಬರಲಿ ಅಪ್ಪ. ನಾನಂತೂ ಸದಾ ಸಿದ್ಧಳಾಗೇ ಇದ್ದೇನೆ" ಎಂದು ಹೇಳಿ ಬಟ್ಟೆಗಳನ್ನು ತೆಗೆದುಕೊಂಡು, ಹೊರಬಂದಳು. ಆಕೆಯ ತತ್ಪರತೆಯನ್ನು ಕಂಡು ಜಮಾದಾರನು ಚಕಿತನಾದನು.

ರಾಜಕುಮಾರಿಯ ಬಂಧನದ ಸುದ್ದಿಯನ್ನು ಕೇಳಿದ ಕೂಡಲೆ, ಸಾವಿರಾರು ಜನರು ಗುಂಪುಸೇರಿ, ಮಾರ್ಗದಲ್ಲಿ ನಿಂತರು. ಕೆಲವರು ಕಾರಿನ ಮುಂದೆ ಮಲಗಿದರು. ಹೆಂಗಸರು ಬೀಳ್ಕೊಡುವುದಕ್ಕಾಗಿ ನೆರೆದರು; ಹಾರಹಾಕಿದರು. ಜಯಕಾರ ಮಾಡಿದರು. ಕಾರು ಮುಂದೆ ಹೋಗಲಾಗಲಿಲ್ಲ.

ಜಮಾದಾರನು ಸಿಟ್ಟುಗೊಂಡು ಎಲ್ಲರನ್ನೂ ಹೊರಟುಹೋಗುವಂತೆ ಹೇಳಿ, ಹೋಗದಿದ್ದರೆ ಸೆರೆಮನೆಗೆ ಕಳುಹಿಸುವಂತೆ ಗದರಿಸಿದನು.

ಎಲ್ಲರೂ—(ಒಂದೇ ಸ್ವರದಲ್ಲಿ) ನಾವು ಜೀವಿಸಿರುವವರೆಗೆ ಈ ದೇವಿಯನ್ನು ಬಿಟ್ಟುಕೊಡಲಾರೆವು. ನೀವು ನಮ್ಮ ಮೇಲೆ ಕಾರನ್ನು

ನಡೆಸಿರಿ. ನಮಗಂತೂ ಪ್ರಾಣದ ಮೇಲೆ ಆಸೆಯೇ ಇಲ್ಲ. ಇಲ್ಲಿಯ ಜೀವನಕ್ಕಿಂತ, ಮರಣವೇ ಉತ್ತಮ.

ಜಮಾದಾರನು ಅಂಜಿ ರಾಜಕುಮಾರಿಯೊಡನೆ "ಅಮ್ಮಾ, ಇವರೆಲ್ಲರನ್ನೂ ಕಳುಹಿಸಿಬಿಡಿ ಈ ಹಳ್ಳಿಯವರಿಗೆ ಹೇಳೋಕಾಗುವುದಿಲ್ಲ. ನೀವು ಹೇಳಿದರೇ ಇವರು ಕೇಳುವುದು" ಎಂದನು.

ಅಷ್ಟರಲ್ಲಿ ಹಿಂದೆ ಹಳ್ಳಿಯವರ ದೊಡ್ಡ ಗುಂಪೇ ಬರುತ್ತಿತ್ತು. ಎಲ್ಲರೂ ದಂಗೆ ಏಳುವುದಕ್ಕಾಗಿಯೇ ಬಂದಿರುವರೋ ಎಂಬಂತಿತ್ತು. ಜಮಾದಾರನು ಹೆದರಿ "ಅಮ್ಮಾ ಈಗ ನೀವೇ ನನ್ನನ್ನು ರಕ್ಷಿಸಬೇಕಾಗಿದೆ" ಎಂದು ಬೇಡಿಕೊಂಡನು.

ರಾಜಕುಮಾರಿ—(ಉಚ್ಚಸ್ವರದಲ್ಲಿ) "ಮಹನೀಯರೇ, ನೀವೆಲ್ಲ ಏಕೆ ಬಂದಿರುವಿರಿ? ನನ್ನನ್ನು ಬೀಳ್ಕೊಡಲು ಬಂದಿರುವಿರಾದರೆ, ಇಗೊಳ್ಳಿ ನಮಸ್ಕಾರ, ಹೊರಡಿ".

ಒಬ್ಬನು ಹೆಗಲ ಮೇಲೆ ಲಾಠಿಯನ್ನಿಟ್ಟುಕೊಂಡು ಬಂದು "ಅಮ್ಮಾ ನಾವು ಬದುಕಿರುವ ವರೆಗೆ ನೀವು ಪೋಲಿಸರ ವಶವಾಗಲಾರಿರಿ. ನಾವು ಇಲ್ಲೇ ಇದ್ದು, ಹೊಡೆದು ಸಾಯುವೆವು. ನಮ್ಮ ಹೆಣಗಳ ಮೇಲೇ ಈ ಕಾರು ಹೋಗಬೇಕು" ಎಂದು ಹೇಳಿ ತನ್ನ ಸಂಗಡಿಗರನ್ನು ಕುರಿತು "ನಿಂತ್ಕೊಂಡೇ ನೋಡ್ತಾ ಇದ್ದೀರೋ? ನೀವು ಮೀಸೆ ಹೊತ್ಕೊಂಡು, ಈ ಅಮ್ಮಾವ್ರನ್ನ ಪೋಲೀಸರು ಹಿಡಿಯೋದಂದ್ರೇನ್ರೋ? ಹೇಗೂ ಒಂದು ದಿನ ಸಾಯಲೇಬೇಕು, ಇವತ್ತೇ ಏಕೆ ಸಾಯಬಾರದು?" ಎಂದು ಗರ್ಜಿಸಿದನು. ಜನರು ಗಲಭೆಗಾರಂಭಿಸಿದರು. ಆಗ ರಾಜಕುಮಾರಿಯು ಹೀಗೆ ನುಡಿದಳು—"ನಮ್ಮದು ಧರ್ಮಯುದ್ಧ. ನಿಮಗೆ ನನ್ನ ಮತ್ತು ನನ್ನ ಸ್ವಾಮಿಯಲ್ಲಿ ನಂಬಿಕೆ ಇದ್ದರೆ ಹೋಗಿ ದೇಶಹಿತಕ್ಕಾಗಿ ಕೆಲಸ ಮಾಡಿರಿ. ಮೋಹಕ್ಕೆ ಸಿಕ್ಕಿ ನಿಮ್ಮ ಧರ್ಮವನ್ನು ತ್ಯಜಿಸುವುದೇ? ಮೋಹವನ್ನು ತ್ಯಜಿಸಿ ಧರ್ಮವನ್ನು ಪಾಲಿಸಿರಿ. ಸಹೋದರರೇ, ಮನೆಗೆ ಹೋಗಿರಿ ನನ್ನ ಗೌರವವು ನಿಮ್ಮ ಕೈಯಲ್ಲಿದೆ ನಿಮ್ಮ ಧರ್ಮವನ್ನು ಪಾಲಿಸುವುದರಿಂದಲೇ ನನಗೆ ಆನಂದವುಂಟಾಗುವುದು. ಈ ಗ್ರಾಮದ ಪ್ರತಿ ಸ್ತ್ರೀ ಪುರುಷ, ಬಾಲಕ ಎಲ್ಲರೂ ತಮ್ಮ ಸರ್ವಸ್ವವನ್ನೂ ಭಾರತ ಮಾತೆಯ

ಉದ್ಧಾರಕ್ಕಾಗಿ ಅರ್ಪಿಸಿದ ದಿನವೇ ಸುದಿನ! ಆಗಲೇ ಸ್ವರಾಜ್ಯವು ದೊರೆಯುವುದು".

ಜನರು ದೂರ ಸರಿದರು ಕಣ್ಣಿನಲ್ಲಿ ನೀರು ಸುರಿಸುತ್ತಾ "ಭಾರತ ಮಾತಾಕೀ ಜೈ" ಎಂದು ಜಯಕಾರ ಮಾಡಿದರು

---

## ೧೨ ಬಕರೀದ್ ಖುರ್ಬಾನೀ (ಬಲಿದಾನ).

ಶಾಂತಿದೇವಿಯು ವಿಧವೆಯಾಗಿ ಅನೇಕ ವರ್ಷಗಳಾಗಿದ್ದುವು. ಅವಳ ಜೀವನದ ಮುಖ್ಯ ಕೆಲಸವೆಂದರೆ ಪರೋಪಕಾರ ಮಾಡುವುದೇ. ತನ್ನ ಮೊಹಲ್ಲದಲ್ಲಿ ಯಾರಿಗಾದರೂ ರೋಗ ಬಂದರೆ ಏನಾದರೂ ತೊಂದರೆ ಬಂದರೆ, ಶಾಂತಿ ದೇವಿಯು ಅವರ ಸೇವೆಯಲ್ಲಿ ತೊಡಗುವಳು. ರಾಷ್ಟ್ರೀಯ ಚಳವಳಿಯು ಪ್ರಾರಂಭವಾದಾಗಿನಿಂದ ಅದರಲ್ಲಿ ಭಾಗವಹಿಸಿದ್ದಾಳೆ, ಲಾಠಿ ಏಟನ್ನು ತಿಂದಿದ್ದಾಳೆ, ಸೆರೆಮನೆಗೆ ಹೋಗಿದ್ದಾಳೆ, ಪುನಃ ಹೋಗಲು ಸಿದ್ಧಳಾಗಿದ್ದಾಳೆ, ಅವಳದು ಅತ್ಯಂತ ಸರಳಸ್ವಭಾವ, ಸೇವಾಭಾವನೆಯಿಂದ ತುಂಬಿದ ಹೃದಯ.

ನಾಳೆ ಬಕರೀದ್ ಹಬ್ಬ. ನಗರದಲ್ಲೆಲ್ಲ ಗಡಿಬಿಡಿಯುಂಟಾಗಿದೆ; ಚಿತ್ರವಿಚಿತ್ರವಾದ ಸುದ್ದಿಗಳು ಹರಡಿವೆ. ಹಿಂದು ಮುಸಲ್ಮಾನ್ ದಂಗೆಯ ಭಯದಿಂದ ಎಲ್ಲರೂ ನಡುಗುತ್ತಿದ್ದಾರೆ. ನಗರದ ಪ್ರಮುಖ ಮುಖಂಡರು ಜನರಿಗೆ ತಿಳಿವಳಿಕೆಯನ್ನು ಕೊಡುತ್ತ ತಿರುಗುತ್ತಿದ್ದಾರೆ. ಆದರೂ ಜನರ ಭಯ ತಪ್ಪಿಲ್ಲ ಎರಡು ಪಂಗಡಗಳಲ್ಲಿಯೂ ಪುಂಡರ ಪ್ರಭಾವವೇ ಹೆಚ್ಚುತ್ತಿದೆ. ಒಂದು ಗುಂಪಿನವರು—"ಕುರ್ಬಾನಿ ಕೊಡುವುದು ನಮ್ಮ ಧರ್ಮ, ನಾವು ಸಾರ್ವತ್ರಿಕವಾಗಿ ಕುರ್ಬಾನ್ ಮಾಡುವೆವು. ಸಾರ್ವತ್ರಿಕವಾಗಿ ಪೂಜೆ ನಡೆಯುವಾಗ, ನಾವೇಕೆ ಕುರ್ಬಾನ್ ಮಾಡಬಾರದು"—ಎಂದು ಕೂಗುತ್ತಿದ್ದರೆ, ಇನ್ನೊಂದು ಕಡೆಯವರ ಉತ್ತರ— "ನೀವು ಹಸುವನ್ನು ಕೊಲ್ಲುವುದು ನಿಮ್ಮ ಧಾರ್ಮಿಕ ಅಧಿಕಾರವೆಂದು ಹೇಳುವದಾದರೆ ನಾವೂ ಕೂಡ ಪೇಟೆಯಲ್ಲೇ ಹಂದಿಯನ್ನು ಕೊಲ್ಲುವೆವು ನಮಗೂ ಧಾರ್ಮಿಕ ಅಧಿಕಾರವಿದೆ!" ಇಂತಹ ಉದ್ದಂಡ ಪ್ರಶ್ನೋತ್ತರಗಳನ್ನು ಕೇಳಿ ಕೇಳಿ ಜನಸಾಮಾನ್ಯರ

ಪ್ರಾಣವು ಒಣಗಿ ಹೋಗುತ್ತಿದೆ. ನಾಳೆ ಏನು ಅನರ್ಥವಾಗುತ್ತದೋ ಎಂದು ಎಲ್ಲರಿಗೂ ಭಯ!

೦೦ ೦೦ ೦೦

ಶಾಂತಿಯ ಮನೆಯ ಮುಂದೆಯೇ ಒಬ್ಬ ವೃದ್ಧ, ಬಡ ಮುಸಲ್ಮಾನನ ಮನೆ ಇತ್ತು. ಹೆಸರು ಹಮೀದ್‌ಖಾನ್. ಟೋಪಿಗಳ ಅಂಗಡಿಯನ್ನಿಟ್ಟಿದ್ದನು. ಆದಾಯಕ್ಕಿಂತ ವೆಚ್ಚವೇ ಹೆಚ್ಚಾಗಿತ್ತು. ಮನೆಯು ಪಿತ್ರಾರ್ಜಿತವಾದುದು. ಆದರೂ ಪ್ರತಿ ವರ್ಷವೂ ಅದರ ಒಂದಲ್ಲ ಒಂದು ಭಾಗವು ಬಿದ್ದುಹೋಗುತ್ತಿತ್ತು. ಈಗ ಉಳಿದಿರುವುದು ಒಂದೇ ಒಂದು ಕೊಠಡಿ. ಅಲ್ಲೇ ಮಕ್ಕಳು ಮರಿಗಳೊಡನೆ ಜೀವಿಸುತ್ತಿದ್ದನು. ಶಾಂತಿದೇವಿಯು ಅವರ ಮನೆಗೆ ಆಗಾಗ ಹೋಗಿ ಅವರ ಸೇವೆಯನ್ನು ಮಾಡುತ್ತಿದ್ದಳು. ಬಡವರಿಗೆ ಸಾಧಾರಣವಾಗಿ ಧರ್ಮದಲ್ಲಿ ವಿಶೇಷ ಶ್ರದ್ಧೆ ಇರುತ್ತದೆ ಹಮೀದ್‌ಖಾನನು ನಿತ್ಯವೂ ಕಾಲಕ್ಕೆ ಸರಿಯಾಗಿ ನಮಾಜ್ ಮಾಡುತ್ತಿದ್ದನು. ಮತ್ತು ಪ್ರತಿವರ್ಷವೂ ಖುರ್‌ಬಾನಿಯನ್ನು ಸಹ ಕೊಡುತ್ತಿದ್ದನು. ಆದರೆ ಈ ವರ್ಷ ಖುರ್‌ಬಾನಿ ನಡೆಯುವ ನಿರೀಕ್ಷಣೆ ಇರಲಿಲ್ಲ. ಒಂದು ಕರುವನ್ನು ರಾತ್ರಿ ಗುಟ್ಟಿನಲ್ಲಿ ತಂದಿಟ್ಟಿದ್ದನು. ಆದರೆ ಅದನ್ನು ಎಲ್ಲಿ, ಹೇಗೆ ಖುರ್‌ಬಾನ್ ಮಾಡಬೇಕೆಂದು ಅವನಿಗೆ ತಿಳಿದಿರಲಿಲ್ಲ ಈ ರೀತಿ ಚಿಂತಿಸುತ್ತಿದ್ದಾಗ, ಶಾಂತಿಯು ಬಾಗಿಲ ಬಳಿ ಬಂದು—"ಏನಣ್ಣಾ, ನಾಳೆ ನಿಮ್ಮ ಹಬ್ಬವಲ್ಲವೆ? ಇದೇಕೆ ಚಿಂತೆ ಮಾಡುತ್ತಿರುವಿರಿ? ಮೈಗೆ ಚನ್ನಾಗಿಲ್ಲವೇ?" ಎಂದು ಕೇಳಿದಳು.

ಹಮೀದ್‌ಖಾನನಿಗೆ ಮನಸ್ಸಿನಲ್ಲಿದ್ದುದನ್ನು ಹೇಳುವ ಸಾಹಸವಾಗದೆ, "ಮೈಗೇನೂ ಆಗಿಲ್ಲ" ಎಂದನು.

"ಈ ದಿನ ವ್ಯಾಪಾರ ಆಗಲಿಲ್ಲವೇನು?"

"ವ್ಯಾಪಾರವೇನೋ ಆಯಿತು, ನಮ್ಮ ಅದೃಷ್ಟದಲ್ಲಿದ್ದುದು ಸಿಕ್ಕಿತು".

"ಆದರೆ, ನಿತ್ಯ ಇರುತ್ತಿದ್ದಂತೆ ನಗುನಗುತ್ತ ಇಲ್ಲವಲ್ಲ".

"ಏನೇನೋ ಸುದ್ದಿಗಳನ್ನು ಕೇಳಿ ಹೆದರಿಕೆ ಆಗುತ್ತೆ ಐತಕ್ಕ ನಾಳೆನೇ ಬಕರೀದ್ ಹಬ್ಬ".

"ಹಾಗಾದರೆ ನಿಮ್ಮ ಮನೆಯಲ್ಲಿಯೂ ಖುರ್ಬಾನಿ ಉಂಟೇನು?"

"ಅಲ್ಲಾನಿಗೆ ಏನು ಮನಸ್ಸು ಬರ್ತದೋ, ಅದೇ ಅಯ್ತಾದವ್ವ. ನನಗೆ ಪರಾಯ (ಯೌವನ) ಬಂದಾಗಿನಿಂದ-ಒಂದೇ ಸಮ ಖುರ್ಬಾನಿ ಕೊಡ್ತಾ ಬಂದಿದ್ದೀನಿ. ಈ ಸಾರಿ ಏನಾಗ್ತದೋ ಕಾಣೆ".

"ಈ ಬೀದಿಯಲ್ಲೇನೂ ಭಯವಿಲ್ಲ. ನಿಮ್ಮ ಧಾರ್ಮಿಕ ಕೆಲಸಗಳಿಗೆ ಯಾರು ಅಡ್ಡಿ ಬರೋರು?"

"ಎಲ್ಲಾರೂ ನಿಮ್ಮಂತೇನೇ ಇರ್ತಾರೇನವ್ವ? ಹಿಂದುಗಳ ಬೀದಿ. ಖುರ್ಬಾನಿ ಕೊಟ್ಟು, ಏನಾದರೂ ಜಗಳ ಆದ್ರೆ ನನ್ನ ತಲೆ ಮೇಲೆ ಮಾತು ಬರೋದಿಲ್ವೆ?"

"ನಿಮ್ಮ ಮನೇಲಿ ನೀವಿದ್ರೆ, ಯಾರೂ ಏನೂ ಮಾಡಲಾರರು".

"ಆದರೆ ಮನೇಲಿ ಜಾಗಾನೇ ಇಲ್ಲವಲ್ಲವ್ವಾ. ಒಂದೇ ಒಂದು ಕೊಠಡಿ ಇರೋದು, ಅಲ್ಲೇ ಖುರ್ಬಾನ್ ಕೊಡೋದು, ಅದನ್ನು ನೋಡಿ ಪುಂಡರು ಗಲಾಟೆ ಮಾಡೋದು, ಹಾಗಾದ್ರೆ ಏನ್ಮಾಡ್ಲಿ? ಈ ಸಾರಿ ಕೊಡಲೇಬಾರದೂ ಅಂತ ಇದ್ದೀನಿ".

ಅಷ್ಟರಲ್ಲಿ ಅವನ ಪತ್ನಿಯಾದ ಅಮೀನಾಳು ಬಂದು "ಮಗಳೇ, ಖುರ್ಬನ್ ಕೊಡದವರನ್ನು ಅಲ್ಲಾಹನು ಮಾಫ್ ಮಾಡೋದೇ ಇಲ್ಲಾಂತ ಖುರಾನಿನಲ್ಲಿ ಹೇಳಿದೆ" ಎಂದು ಹೇಳಿದಳು.

ಇಬ್ಬರ ಮಾತನ್ನೂ ಕೇಳಿ ಶಾಂತಿಯು 'ಅವರವರ ಧರ್ಮ ಎಂದರೆ ಎಲ್ಲರಿಗೂ ಎಷ್ಟು ಪ್ರೀತಿ! ಕಾಲದಿಂದಲೂ ಮಾಡಿಕೊಂಡು ಬರುತ್ತಿದ್ದ ಕೆಲಸವನ್ನು ನಿಲ್ಲಿಸೋದೂಂದ್ರೆ ಎಷ್ಟು ಕಷ್ಟ! ಪಾಪ, ಇವರಿಗೆ ಎಷ್ಟು ಚಿಂತೆಯಾಗುತ್ತಿದೆ' ಎಂದು ಯೋಚಿಸಿ, ಅವರನ್ನು ಕುರಿತು "ಅಣ್ಣಾ, ನೀವು ಇಷ್ಟೇಕೆ ಯೋಚಿಸುತ್ತಿರುವಿರಿ? ನನ್ನ ಮನೇಲೇ ಖುರ್ಬಾನಿ ಕೊಡಬಹುದಲ್ಲ. ಯಾರಿಗೂ ತಿಳಿಯುವುದಿಲ್ಲ. ನನ್ನ ಮನೆಗೆ ಯಾರು ಬರ್ತಾರೆ ನೋಡೋಕೆ" ಎಂದಳು.

ಹಮೀದ್ ಮತ್ತು ಅವನ ಹೆಂಡತಿ ಇಬ್ಬರೂ ವಿಸ್ಮಿತರಾಗಿ ಶಾಂತಿಯನ್ನು ನೋಡಿದರು. ಅವಳ ಮಾತುಗಳು ಅವರಿಗೆ ಸ್ವಪ್ನದಲ್ಲಿ

ಕಂಡಂತಿದ್ದವು. ಒಬ್ಬ ಹಿಂದೂ ಸ್ತ್ರೀಯು ತನ್ನ ಮನೆಯಲ್ಲಿ ಖುರ್ಬಾನಿಗೆ ಅವಕಾಶ ಕೊಡುವುದೇ? ಎಷ್ಟು ಅಸಂಭವದ ಮಾತು!

"ತಂಗಿ, ಏನಿದು ನೀನು ಹೇಳುತ್ತಿರುವುದು? ಎಲ್ಲಿಯಾದರೂ ಸಾಧ್ಯವೇ? ಅವರವರ ಧರ್ಮ ಅವರಿಗೆ ಹೆಚ್ಚು. ಯಾರಾದರೂ ಕೇಳಿದರೇನ್ಗತಿ?"—ಎಂದ ಹಮೀದ್.

ಶಾಂತಿಯು ನಿಶ್ಚಯಭಾವದಿಂದ "ಒಂದು ಧರ್ಮಕಾರ್ಯಕ್ಕೆ ಸಹಾಯ ಮಾಡುವುದರಲ್ಲಿ, ನನಗೆ ಸ್ವಲ್ಪ ತೊಂದರೆಯಾದರೂ ನಾನು ಅದನ್ನು ಸಂತೋಷದಿಂದ ಸಹಿಸಿಕೊಳ್ಳುವೆನು. ನನ್ನ ಪ್ರಾಣವಿರುವವರೆಗೆ ಯಾರೂ ನಿಮ್ಮ ಖುರ್ಬಾನಿಗೆ ವಿಘ್ನ ಮಾಡಲಾರರು!" ಎಂದು ಬಿಟ್ಟಳು.

ಪತಿಪತ್ನಿಯರಿಬ್ಬರೂ ಶಾಂತಿಯನ್ನು ಆಶಿರ್ವದಿಸಿದರು.

○○ ○○ ○○

ರಾತ್ರಿ ಶಾಂತಿಗೆ ನಿದ್ದೆ ಬರಲಿಲ್ಲ. ನಾಳೆ ನನ್ನ ಮನೆಯಲ್ಲಿ ಕುರ್ಬಾನಿಯಾಗುವುದು ಯಾರಿಗಾದರೂ ತಿಳೀತೂಂದ್ರೇ ನನ್ನನ್ನು ಜೀವಸಹಿತ ಬಿಡಲಾರರು. ದೇವರೇ, ನನ್ನ ಮರ್ಯಾದೆಯನ್ನು ರಕ್ಷಿಸು. ಹಸುವು ನಮಗೆ ಪ್ರಿಯವೆ; ಆದರೆ ಅದಕ್ಕಿಂತ ಮನುಷ್ಯನೇ ಹೆಚ್ಚು ಪ್ರಿಯನು. ಹಸುವಿಗಾಗಿ ಮನುಷ್ಯನೊಬ್ಬನು ಮತ್ತೊಬ್ಬನ ರಕ್ತವನ್ನು ಹರಿಸುವ ಈ ಅನ್ಯಾಯವು ಎಲ್ಲಿಯ ತನಕ ನಡೆಯಬೇಕು? ಕೂಡದು!

ಬೆಳಿಗ್ಗೆ ಹಮೀದ್‌ಖಾನ್ ಬಂದು—"ಅಮ್ಮಾ ಖುರ್ಬಾನಿಗೆ ಬರಲೇ? ಇನ್ನೂ ಹೊತ್ತಾಗಿಲ್ಲ. ತಡವಾದರೆ ತೊಂದರೆಯಾಗಬಹುದು" ಎಂದನು.

ಶಾಂತಿಯು ಹರ್ಷದಿಂದ "ಹೌದು, ಹೌದು, ಬನ್ನಿ. ನಾನಂತೂ ಸಿದ್ಧಳಾಗಿದ್ದೇನೆ. ಯಾವಾಗ ಬಂದರೂ ಸರಿಯೆ!" ಎಂದಳು.

ಹಮೀದ್‌ಖಾನನು ಮನೆಗೆ ಹೋಗಿ ಪತ್ನಿಯೊಡನೆ, ತಾನು ಈದೂವನ್ನು ಕರೆತರುತ್ತೇನೆ, ನೀನು ಸ್ನಾನ ಮಾಡಿ ಸಿದ್ಧಳಾಗಿರಬೇಕು ಎಂದು ಹೇಳಿ ಹೋದನು ಸ್ವಲ್ಪ ಹೊತ್ತಿನಲ್ಲಿ ಮೂವರೂ ಹಸುವಿನೊಡನೆ ಶಾಂತಿಯ ಮನೆಗೆ ಬಂದರು

ಶಾಂತಿದೇವಿಯು ಹಸುವನ್ನು ನೋಡಿದಾಗ, ಹೃದಯದಲ್ಲಿ ವಿದ್ಯುತ್ಸಂಚಾರವಾದಂತಾಯಿತು. ಅದರೂ ಮನಸ್ಸನ್ನು ನಿಗ್ರಹಿಸಿ ಒಂದು ಕೋಣೆಯನ್ನು ತೋರಿಸುತ್ತ ಹೇಳಿದಳು:–"ಇಲ್ಲೇ ಮಾಡಿ ಕೊಳ್ಳಿ. ಅಲ್ಲಿ ವರೆಗೆ ನಾನು ಬಾಗಿಲ ಬಳಿ ಕಾಯುತ್ತಿರುವೆನು"

ಕೊಠಡಿಯಲ್ಲಿ ಹಸು ನಿಂತಿದೆ. ಬಾಗಿಲ ಬಳಿ ಅಮೀನಾಳು ನಿಂತಿದ್ದಾಳೆ ಹಮೀದನು ಹಸುವಿನ ಕುತ್ತಿಗೆಯನ್ನು ಹಿಡಿದುಕೊಂಡು ನಿಂತಿದ್ದಾನೆ. ಈದೂವು ಚಾಕನ್ನು ಹಿಡಿದು ಸಿದ್ಧನಾಗಿದ್ದಾನೆ. ಆದರೆ ಇದ್ದಕ್ಕಿದ್ದಂತೆ ಹಮೀದ—"ಇಲ್ಲ. ಈದೂ, ಬೇಡ ನಾನು ಖುರ್ಬಾನಿ ಕೊಡುವುದಿಲ್ಲ" ಎಂದುಬಿಟ್ಟನು.

"ಏಕೆ. ಏನಾಯಿತು?"—ಈದುವಿನ ಗರ್ಜನೆ.

"ಯಾರು ನಮ್ಮ ಧರ್ಮಕ್ಕೆ ಇಷ್ಟು ಮರ್ಯಾದೆಯನ್ನು ತೋರಿಸಿದರೋ, ಅವರ ಧಾರ್ಮಿಕ ಮನೋಭಾವನೆಯನ್ನು ನಾವೂ ಮರ್ಯಾದೆಯಿಂದ ಕಾಣಲೇಬೇಕು. ಎಂತಹ ಸೊಗಸಾದ ಹಸು! ಅದನ್ನು ಕೊಲ್ಲುವುದರಿಂದ ಅಲ್ಲಾಹನಿಗೆ ಸಂತೋಷವಾಗುವುದಾದರೆ ಅದನ್ನು ಬಿಟ್ಟುಬಿಡುವುದರಿಂದ ಮತ್ತಷ್ಟು ಸಂತೋಷವಾಗೇ ಆಗುವುದು. ಒಬ್ಬ ಸ್ತ್ರೀಯು ಇಷ್ಟು ಪಕ್ಷಪಾತ ರಹಿತಳಾಗಿರುವಾಗ. ನಾವು ಇಷ್ಟಾದರೂ ಸಹನೆ ತೋರಿಸುವದು ಬೇಡವೇ?"—ಎಂದ ಹಮೀದ.

"ಹೌದು, ನಮ್ಮ ಧರ್ಮವನ್ನು ಗೌರವಿಸುವವರನ್ನು ನಾವೂ ಗೌರವಿಸಲೇ ಬೇಕು"–ಅಮೀನಾ ಸ್ವರಗೂಡಿಸಿದಳು.

ಹಮೀದ್—"ಆ ಸ್ತ್ರೀಯ ಮನಸ್ಸನ್ನು ನೋಡಿ!"

ಅಮೀನಾ—"ಇತರರಿಗೆ ಒಳ್ಳೇದು ಮಾಡೋದೇ ಅವರ ಕೆಲಸ".

ಹಮೀದ್ -"ಪ್ರಾಣ ಭಯವು ಸ್ವಲ್ಪವೂ ಇಲ್ಲ"

ಅಮೀನಾ—"ಗಂಡಸರಿಗೆಲ್ಲಿದೆ ಈ ಧೈರ್ಯ?"

ಹಮೀದ್—"ಈ ಹಸುವನ್ನು ಶಾಂತಿ ದೇವಿಗೇ ಅರ್ಪಿಸಿ ಬಿಡೋಣ".

ಅಮೀನಾ—"ಆ ರೀತಿ ಮಾಡುವುದರಿಂದ ಖುರ್ಬಾನಿಗಿಂತ ಹೆಚ್ಚು ಸವಾಬ್ (ಪುಣ್ಯ) ಬರುತ್ತೇಂತ ನನ್ನ ಅಭಿಪ್ರಾಯ".

ಒಳ್ಳೇ ಚರ್ಮವು ದೊರೆಯುವುದೆಂದು ಬಂದಿದ್ದ ಈ ದೂಗೆ ಈಗ ಬಹಳ ನಿರಾಶೆಯಾಯಿತು.

ಹಮೀದ್ ಖಾನನು ಹಸುವಿನೊಡನೆ ಶಾಂತಿಯ ಮನೆಗೆ ಹೋದು ದನ್ನು ಪಕ್ಕದ ಮನೆಯ ಹಿಂದುವೊಬ್ಬನು ನೋಡಿದ್ದನು ಅವನು ತನ್ನ ಅಣ್ಣನಿಗೆ ಹೇಳಿದನು ಅಣ್ಣನು ಒಮ್ಮೆಗೇ ಗಲಭೆಯೆಬ್ಬಿಸಿ "ಶಾಂತಿಯ ಮನೆಯಲ್ಲಿ ಖುರ್ಬಾನಿ!" ಎಂದು ಕೂಗಿಕೊಂಡನು. ಸರಿ, ಕೇಳಬೇಕೇ? ಒಂದೇ ಕ್ಷಣದಲ್ಲಿ ನೂರಾರು ಜನರು, ಲಾಠಿಗಳೊಡನೆ, ಶಾಂತಿಯ ಮನೆಯ ಬಳಿ ಬಂದು, ಬಾಗಿಲು ತೆಗೆಯುವಂತೆ ಹೇಳಿದರು

ಶಾಂತಿಯು ಧೃಢತೆಯಿಂದ ಹೇಳಿದಳು: "ನಾನಿಲ್ಲಿರುವತನಕ ಯಾರೂ ಒಳಗೆ ಹೋಗಲಾರಿರಿ ನನ್ನನ್ನು ಕೊಂದೇ ಒಳಗೆ ಹೋಗಬಲ್ಲಿರಿ".

"ಜೈಲಿಗೆ ಹೋಗಿ ಬಂದೇ ಅಂತ ಈ ಬೀದಿಗೆ ರಾಣಿಯಾಗಿ ಬಿಟ್ಟೇಂತ ತಿಳ್ಕೊಂಡೆಯಾ? ಅದನ್ನು ಬಿಟ್ಟುಬಿಡು!'' ಎಂದು ಮುಂದೆ ಬಂದನೊಬ್ಬ.

"ಈ ಪಾಪಿಯನ್ನು ಕೊಲ್ಲೋದೇ ಒಳ್ಳೇದು" ಎಂದು ತೀರ್ಮಾನಿಸಿದ ಇನ್ನೊಬ್ಬ.

''ಸರಿ ಇಲ್ಲಿಂದ'' ಎಂದ ಮತ್ತೊಬ್ಬ.

ನಾಲ್ಕನೆಯವ – ''ಮುಸಲ್ಮಾನಳಾಗಿದ್ದಾಳೆ ಮುಸಲ್ಮಾನ್!''

ಐದನೆಯವ—' ಇಲ್ಲಿಂದ ಕದಲುವೆಯೋ ಇಲ್ಲವೋ?"

ಶಾಂತಿಯು ಆಗಲೂ ಅನಿಚಲಳಾಗಿ "ಬದುಕಿರುವವರೆಗಂತೂ ಕದಲುವವಳಲ್ಲ ನನ್ನ ಶವವು ನೆಲದ ಮೇಲೆ ಬಿದ್ದಾಗಲೇ ಬಾಗಿಲು ತೆಗೆಯಲ್ಪಡುವುದು. ನಾನು ಏನು ಬೇಕಾದರೂ ಮಾಡುವೆನು, ಆದರೆ ವಿಶ್ವಾಸಘಾತುಕತನವನ್ನು ಮಾತ್ರ ಮಾಡಲಾರೆ!"

ಧರ್ಮ ಧ್ವಜಧಾರಿಗಳಿಗೆ ಇದೆಲ್ಲವನ್ನೂ ಕೇಳುವಷ್ಟು ಸಹನೆ ಎಲ್ಲಿ? ಅನೇಕರು ಶಾಂತಿದೇವಿಯ ಮೇಲೆ ಲಾಠಿಯನ್ನು ಪ್ರಯೋಗಿಸಿದರು. ಪಾಪ, ಅವಳು ಮೊದಲನೇ ಏಟಿಗೆ ನೆಲಕ್ಕುರುಳಿದಳು. ಆದರೆ ಅವರಿಗೆ ದಯೆ ಬರಲಿಲ್ಲ ಲಾಠಿಗಳ ಹೊಡೆತದಿಂದ ಅವಳನ್ನು ಅಲ್ಲಿಯೇ ಕೊನೆಗಾಣಿಸಿ, ಒಳಕ್ಕೆ ಹೋದರು.

ಆದರೆ ಒಳಗೆ ವಿಚಿತ್ರ ದೃಶ್ಯವೇ ಇತ್ತು ಹಸುವು ಕೊಲ್ಲಲ್ಪಟ್ಟಿರಬಹುದೆಂದು ಜನರು ಊಹಿಸಿದ್ದರು. ಆದರೆ ಅಲ್ಲಿ ಹೋಗಿ ನೋಡಿದರೆ, ಹಸು ಸುಮ್ಮನೆ ನಿಂತಿದೆ. ಹಮೀದ ಮತ್ತು ಅಮೀನಾ ಅದನ್ನು ತಿಕ್ಕುತ್ತಾ ನಿಂತಿದ್ದಾರೆ

ಒಬ್ಬ ಸಿಟ್ಟಿನಿಂದ ಮುಂದೊತ್ತಿ ಹೇಳಿದ: "ನಿಮ್ಮ ಮನೆಯಲ್ಲಿ ಮಾಡಲು ಧೈರ್ಯವಿಲ್ಲದೆ ಇಲ್ಲಿಗೆ ಬಂದಿರಾ? ಪ್ರಾಣದ ಮೇಲೆ ಆಸೆ ಇದ್ದರೆ ಸುಮ್ಮನೇ ಹೊರಟುಹೋಗಿ!"

ಹಮೀದ್— "ಖುರ್ಬಾನಿ ಮಾಡಬೇಕೆಂತ ಮನಸ್ಸಿದ್ದಿದ್ದರೆ ಇಷ್ಟು ಹೊತ್ತಿಗೆ ಮಾಡಿಬಿಡ್ತಿದ್ದೆವು ಬಂದದ್ದು ಅದಕ್ಕಾಗಿಯೇ. ಆದರೆ ಶಾಂತಿದೇವಿಯ ಸದ್ಗುಣವನ್ನು ನೋಡಿ ನಾವೂ ಹಿಂದುಗಳಾಗಿ ಬಿಟ್ಟೆವು. ತನ್ನ ಮನೆಯಲ್ಲಿ ಹಸುವನ್ನು ಕೊಲ್ಲಲು, ಆಕೆಯು ಅವಕಾಶವಿತ್ತಾಗಲೇ, ನಮಗೆ ಹಸುವು ಪೂಜ್ಯವಾಯಿತು. ನನ್ನ ಮನೆಯಲ್ಲಿ ಇಂದಿನಿಂದ ಎಂದಿಗೂ ಖುರ್ಬಾನಿಯಾಗುವುದಿಲ್ಲವೆಂದು ವಚನ ಕೊಡುತ್ತೇನೆ ಎಲ್ಲಿ, ಶಾಂತಿಯನ್ನು ಕರೆಯಿರಿ"—ಹಮೀದ್ ತ್ಯಾಗಮೂರ್ತಿಯಾಗಿ ಮಾರ್ಪಾಟ ಹೊಂದಿದ್ದ.

ಗುಂಪಿನಲ್ಲಿ ಗಡಿಬಿಡಿಯೆದ್ದಿತು ಯಾರ ಧರ್ಮ ಪ್ರಿಯ ಲೂಟಿಗಳು ಶಾಂತಿದೇವಿಯ ಪ್ರಾಣವನ್ನು ತೆಗೆದುಕೊಂಡಿದ್ದವೋ, ಅವರ ತಲೆಗಳು ಲಜ್ಜೆಯಿಂದ ಬಾಗಿದುವು ಅವರಾಡುತ್ತಿದ್ದ ಮಾತುಗಳನ್ನು ಕೇಳಿ, ಹಮೀದ್‌ಖಾನನಿಗೆ ಈ ದುಷ್ಟರು ಶಾಂತಿಯನ್ನು ತೀರಿಸಿ ಬಿಟ್ಟಿರಬಹುದೆಂಬ ಸಂದೇಹವುಂಟಾಯಿತು ಬಾಗಿಲ ಬಳಿ ಓಡಿಹೋಗಿ ನೋಡಲು ಶಾಂತಿಯು ಶವವಿತ್ತು. "ಅಯ್ಯೋ, ಮಗಳೇ! ಈ ಕೊಲೆಪಾತಕರು ನಿನ್ನನ್ನು ಈ ರೀತಿ ನಿರ್ದಯರಾಗಿ ಕೊಂದುಬಿಟ್ಟರೆ? ಇವೇ ನಿಮ್ಮ ಅಹಿಂಸೆಯು? ನಾನು ಖುರ್ಬಾನಿಯನ್ನು ಕೊಟ್ಟಿದ್ದರೂ, ಒಂದು ಹಸು ಮಾತ್ರ ಸಾಯುತ್ತಿತ್ತು. ಆದರೆ ಸಾವಿರಾರು ಹಸುಗಳನ್ನು ರಕ್ಷಿಸುತ್ತಿದ್ದ ಈ ಸ್ತ್ರೀಯನ್ನೇ ಅತ್ಯಾಚಾರಿಗಳು ತೀರಿಸಿಬಿಟ್ಟರಲ್ಲಾ! ಯಾ ಅಲ್ಲಾಹ್! ಇದೇ ಇವರ ಧರ್ಮವೇ!"

ಹಮೀದನು ಈ ರೀತಿ ರೋದಿಸುತ್ತಾ ಹೊರಟುಹೋದನು. ನಗ

ರದಲ್ಲಿ ಈ ಸುದ್ದಿಯು ವಾಯುವೇಗದಿಂದ ಹರಡಿತು ಹಿಂದು ಮುಸಲ್ಮಾನರೆಲ್ಲ ಮೂಗಿಗೆ ಬೆರಳಿಟ್ಟುಕೊಂಡರು ಎಲ್ಲರೂ ಶಾಂತಿ ಮತ್ತು ಹಮೀದ್‌ಖಾನನನ್ನು ಹೊಗಳಿದರು ಅವಳನ್ನು ಕೊಂದವರನ್ನು ಎಲ್ಲರೂ ನಿಂದಿಸಹತ್ತಿದ್ದರು. ಶಾಂತಿಯು ತನ್ನ ಪ್ರಾಣವನ್ನು ಆಹುತಿ ಕೊಟ್ಟು ಎಲ್ಲರಿಗೂ ಈ ಕೆಳಗಿನ ಪಾಠವನ್ನು ಕಲಿಸಿಕೊಟ್ಟಳು:—

"ನಿಮ್ಮ ಧರ್ಮದ ಮಹಿಮೆಯನ್ನು ಇತರರು ಸ್ವೀಕರಿಸಬೇಕೆಂಬ ಮನಸ್ಸು ನಿಮಗಿದ್ದರೆ, ಮೊದಲೇ ಅವರ ಧರ್ಮದ ಮಹಿಮೆಯನ್ನು ಸ್ವೀಕರಿಸಿರಿ!"

ಅಂದಿನಿಂದ ಹಸುವನ್ನು ಕೊಲ್ಲುವುದೇ ಇಲ್ಲವೆಂದು ಎಷ್ಟೋ ಮಂದಿ ಮುಸಲ್ಮಾನರು ಪ್ರಮಾಣಮಾಡಿದರು.

ಇದೀಗ ಬಲಿದಾನದ ಮಾಯೆ!

---

## ೧೩ ಸೆರೆಮನೆಯಲ್ಲಿ

— ೧ —

ಅಂಬಾ ದೇವಿಯು ಸೆರೆಮನೆಯನ್ನು ಸೇರಿದಾಗ, ದ್ವಾರದಬಳಿ ಅನೇಕ ಪ್ರಾಂತ್ಯಗಳ ಸಹೋದರಿಯರು ಅವಳನ್ನು ಸ್ವಾಗತಿಸಿದರು. 'ವಂದೇ ಮಾತರಂ' ಧ್ವನಿಯು ಸೆರೆಮನೆಯ ಆವರಣವನ್ನೆಲ್ಲಾ ಆವರಿಸಿಕೊಂಡಿತು. ಆ ಸಂಭ್ರಮವು ಮದುಮಗಳು ಪತಿಯ ಮನೆಯನ್ನು ಪ್ರವೇಶಿಸುತ್ತಿರುವಳೋ ಎಂಬಂತಿತ್ತು. ಆದರೆ ತನ್ನ ತಾಯಿ ತಂದೆಗಳು, ಸಖಿಯರು ಎಲ್ಲರನ್ನೂ ಬಿಟ್ಟು ಮಾವನ ಮನೆಗೆ ಹೋಗುವ ಸೊಸೆಗೆ ಸಂತೋಷವಿರುವುದೇ? ಅಲ್ಲಿಂದ ಹೇಗೆ ಪಾರಾಗಬೇಕೆಂಬುದೇ ಅವಳಿಗಿರುವ ಚಿಂತೆ. ಅಂಬೆಯ ಸ್ಥಿತಿಯೂ ಇದೇ ರೀತಿಯೇ ಇದ್ದಿತು. ಅತ್ತ ಕಡೆ 'ಬಿ' ಮತ್ತು 'ಸಿ' ತರಗತಿಯ ಕೈದಿಗಳು ಈ ಜಯಕಾರವನ್ನು ಕೇಳಿ ಹೊಸದಾಗಿ ಬಂದವಳನ್ನು ನೋಡಲು ಹೊರಗೆ ಬಂದರು. ಅಂಬೆಗೆ ಪುಷ್ಪಹಾರಗಳನ್ನು ಸಮರ್ಪಿಸಿದರು ನಂತರ ಬಂದೀಖಾನೆಯು ಮುಚ್ಚಲ್ಪಟ್ಟಿತು. ಒಳಗಿದ್ದವರೆಲ್ಲರೂ ತಮ್ಮ ಜಿಲ್ಲೆಯ ವಿಷಯವನ್ನು ಕೇಳಲು ಉತ್ಸುಕರಾಗಿದ್ದರು.

ಒಬ್ಬ ಸಹೋದರಿಯೆಂದಳು: "ನಾವಿಲ್ಲಿ ಕೊಳೆಯುತ್ತ ಬಿದ್ದಿರು ವಾಗ, ನೀವು ಹೊರಗೆ ಬೇಕಾದಷ್ಟು ಸುಖವನ್ನನುಭವಿಸಿದಿರಿ".

"ಆ ಸುಖವೆಂತಹದೆಂಬುದು ನನ್ನ ಮನಸ್ಸಿಗೆ ಮಾತ್ರವೇ ಗೊತ್ತು. ತಿರುಗಿ ತಿರುಗಿ ಕಾಲೆಲ್ಲ ತೂತು ಬಿದ್ದುಹೋಯಿತು. ಒಂದೇ ಒಂದು ನಿಮಿಷ ಸಹ ವಿರಾಮವಿಲ್ಲ. ಊಟಕ್ಕೆ ಸಹ ಬಿಡುವಿಲ್ಲ ಇಲ್ಲೀ ನಿಮ್ಮೊಡನೆ ಸ್ವಲ್ಪ ವಿರಾಮ ದೊರೆಯಬಹುದು" ಎಂದಳು ಅಂಬಾ ದೇವಿ.

ಎರಡನೆಯವಳು ಬಾಯಿ ಹಾಕಿ, "ಅಕ್ಕ, ಹೊರಗಡೆಯ ಓಡಾ ಟವು ಇಲ್ಲಿನ ಸುಖಕ್ಕಿಂತ ಎಷ್ಟೋ ಪಾಲು ಉತ್ತಮವಲ್ಲವೇ? ಪ್ರತಿ ದಿನ ಸಾಯಂಕಾಲದ ವೇಳೆಗೆ ನಿನ್ನ ಮಕ್ಕಳು ಮರಿಗಳನ್ನಾದರೂ ನೋಡ ಬಹುದಾಗಿತ್ತೋ ಇಲ್ಲವೋ? ಇಲ್ಲಂತೂ ಮಾಡಲು ಕೆಲಸವಿಲ್ಲ, ಯಾವಾ ಗಲೂ ಮನೆಯ ಕಡೆಗೇ ಮನಸ್ಸಿರುತ್ತದೆ" ಎಂದಳು

ಅಂಬೆಯ ಕಣ್ಣಿನಲ್ಲಿ ನೀರು ಬಂದಿತು. ಅವಳ ಚಿಕ್ಕ ದಿನೇಶನ ಚಿತ್ರವು ಅವಳ ಕಣ್ಣಿನ ಮುಂದೆ ಬಂದು ನಿಂತಿತು. ಅದು 'ಅಮ್ಮಾ, ಅಮ್ಮಾ' ಎಂದು ಅಳುತ್ತಿರಬಹುದು; ತಂದೆಯು 'ನಿಮ್ಮಮ್ಮ ಮಿಠಾಯಿ ತರುವಳು' ಎಂದು ಸಮಾಧಾನಪಡಿಸುತ್ತಿರಬಹುದು-ಎಂಬಿವೇ ಮೊದ ಲಾದ ಯೋಚನೆಗಳು ಅವಳ ಮನಸ್ಸಿನಲ್ಲುಂಟಾದುವು.

— ೨ —

10—12 ಮಂದಿ ಸ್ತ್ರೀಯರು ಅಂಬೆಯೊಡನೆ ಅರ್ಧರಾತ್ರಿ ವರೆಗೆ ಹರಟೆ ಹೊಡೆಯುತ್ತ ಕುಳಿತಿದ್ದರು. ಜೈಲರನು ಅಂಬೆಗಾಗಿ ಒಂದು ಮಂಚ, ಹಾಸಿಗೆ, ಪಾತ್ರೆಗಳು ಮೊದಲಾದುವನ್ನು ತಂದುಕೊಟ್ಟನು. ಊಟದ ಸಮಯವಾಯಿತು. ಎಲ್ಲರೂ ಸೇರಿ ಒಟ್ಟಿಗೆ ಊಟ ಮಾಡಿ ದರು. ಒಬ್ಬಳು ಮಾತ್ರ ಪ್ರತ್ಯೇಕವಾಗಿ ಕುಳಿತಿದ್ದಳು. ಅವಳು ಮಾತಿ ನಲ್ಲಾಗಲಿ, ಊಟದಲ್ಲಾಗಲಿ ಇತರರೊಡನೆ ಸೇರುತ್ತಿರಲಿಲ್ಲ. ಆಗ ಅಂಬೆಯು "ಅಕ್ಕ, ಇದೇನು ಮಾತಾಡಲು ಬರುವುದೇ ಇಲ್ಲವಲ್ಲ! ಏಕೆ ಚಿಂತಿಸುತ್ತಿರುವೆ?" ಎಂದು ಕೇಳಿದಳು. ಆ ಸ್ತ್ರೀಯು ಹತ್ತಿರ ಬಂದಳು. "ಚಿಂತೆ ಏನೂ ಇಲ್ಲ. ಇತರರು ನಿಮ್ಮೊಡನೆ ಮಾತನಾಡುತ್ತಿದ್ದುದ

ರಿಂದ ನಾನು ದೂರ ಇದ್ದೆ, ಅಷ್ಟೆ. ನಾನು ಬಂದಿರುವುದು ಬೇರೆ ಅಪ ರಾಧಕ್ಕಾಗಿ. ಆದುದರಿಂದ ನಿಮ್ಮೊಡನೆ ಹೇಗೆ ತಾನೆ ಬಂದು ಕುಳಿತು ಕೊಳ್ಳಲಿ? ನೀವು ದೇಶೋದ್ಧಾರ ಕಾರ್ಯ ಮಾಡುತ್ತಿರುವಿರಿ; ನಾನಾದರೋ ಒಂದು ಖೂನಿ ಮಾಡಿದ್ದೇನೆ. ಕಳದ ಐದು ವರ್ಷಗಳಿಂದ ಇಲ್ಲಿ ಇದ್ದೇನೆ. ಮತ್ತು ಇನ್ನೂ ಹತ್ತು ವರ್ಷ ಇರುವೆನು" ಎನ್ನುವಾಗ ಅವಳು ಪಡು ತ್ತಿದ್ದ ಯಾತನೆಯನ್ನು ಅಂಬೆಯರಿತಳು.

ಅಂಬೆಯ ಹೃದಯವು ಕೋಮಲವಾದರೂ, ಈ ಸ್ತ್ರೀಯ ಬಗ್ಗೆ ಕಠಿಣವಾಯಿತು. ಇತರರು ಅವಳ ಸಂಗಡ ಏಕೆ ಸೇರುವುದಿಲ್ಲ ಎಂಬು ದರ ಕಾರಣವು ಈಗ ಆವಳಿಗೆ ತಿಳಿಯಿತು. ಆದರೂ ಮಲಗುವುದಕ್ಕೆ ಹೋಗುವ ಮೊದಲು ‘‘ಯಾರನ್ನು ಕೊಂದೆ?’’ ಎಂದು ಕೇಳಿದಳು.

‘‘ಅದನ್ನು ಕೇಳಿ ಏನ್ಮಾಡಬಲ್ಲೆಯಕ್ಕ? ಅದೊಂದು ದೊಡ್ಡ ರಾಮಾಯಣ!" ಎಂದು ಹೇಳಿ ಆಕೆ ಅಳುತ್ತಾ ಹೊರಟು ಹೋದಳು.

೩

ಆ ಸ್ತ್ರೀಯ ಹೆಸರು ಗಂಗೆ. ಗಂಗೆಯು ಬೆಳಗಿನಿಂದ ಸಂಜೆಯ ವರೆಗೆ ಇತರ ಹೆಂಗಸರ ಸೇವೆಯಲ್ಲಿ ಮಗ್ನಳಾಗಿರುತ್ತಿದ್ದಾಳೆ. ಇತರರು ಅವಳನ್ನು ತಮ್ಮ ದಾಸಿಯೆಂದು. ತಿಳಿದಿದ್ದಾರೆ ಅಲ್ಲದೆ ಗಂಗೆಗೂ ಆ ರೀತಿ ಕರೆಯಿಸಿಕೊಳ್ಳಲು ಸಂತೋಷವೇ ಆಗುತ್ತಿದೆ. ಅನೇಕ ಸಹೋ ದರಿಯರ ಸಂಗಡ ಮಕ್ಕಳೂ ಇದ್ದುವು. ಗಂಗೆಯು ಆ ಮಕ್ಕಳನ್ನು ಎತ್ತಿ ಮುದ್ದಾಡುವಳು. ಯಾರು ಅವಳಿಗೆ ಏನು ಕೆಲಸ ಹೇಳಿದರೂ ಸಂತೋಷದಿಂದ ಮಾಡುವಳು. ಆದರೂ ಎಲ್ಲರೂ ಅವಳಿಂದ ದೂರ ವಾಗೇ ಇರುತ್ತಿದ್ದರು ಯಾರಾದರೂ ಅವಳಿಗೆ ಏನನ್ನಾದರೂ ಕೊಟ್ಟರೆ ಗಂಗೆಯು ಅದನ್ನು ನಮ್ರತೆಯಿಂದ ತಿರಸ್ಕರಿಸುತ್ತಿದ್ದಳು. ಯಶಸ್ಸು ಅಥವಾ ಪ್ರತೀಕಾರದ ಇಚ್ಛೆಯಂತೂ ಅವಳಿಂದ ಬಹಳ ದೂರದಲ್ಲಿತ್ತು. ಎಲ್ಲವನ್ನೂ ನಿಸ್ವಾರ್ಥ ಭಾವನೆಯಿಂದ ಮಾಡು ತ್ತಿದ್ದಳು.

ಒಂದೊಂದು ವೇಳೆ ಅಂಬೆಗೆ ಗಂಗೆಯ ಮೇಲೆ ಬಹಳ ದಯೆ ಯುಂಟಾಗುತ್ತಿತ್ತು. ಇತರರ್‍ಯಾರಾದರೂ ಗಂಗೆಯನ್ನು ಬೈದರೆ ಅಂಬೆಯು

ದುಃಖಿತಳಾಗಿ ಅವರ ಮೇಲೆ ಸಿಟ್ಟಾಗುತ್ತಿದ್ದಳು. 'ಇಂತಹ ಸ್ತ್ರೀಯು ಕೊಲೆಪಾತಕಿಯಾದುದು ಹೇಗೆ? ಇಷ್ಟು ಮಂದಿಯ ಪೈಕಿ ಯಾರಿಗೂ ಇವಳ ಮೇಲೆ ದಯೆ ಬಾರದೆ? ನಾವು ಬಂದಿರುವುದು ದೇಶವನ್ನು ಉದ್ಧಾರ ಮಾಡುವುದಕ್ಕಾಗಿ. ಆದರೂ ನಮ್ಮಲ್ಲಿದೆ–ಅದೇ ವಿಲಾಸೀ ಜೀವನದ ಮೇಲಿನ ಮೋಹ, ಅದೇ ಗರ್ವ! ಇದು ನಿಜವಾದ ದೇಶೋದ್ಧಾರದ ಭಾವನೆಯಲ್ಲ! ಕೇವಲ ಯಶಸ್ಸನ್ನು ಪಡೆಯಬೇಕೆಂಬ ಸಂಕುಚಿತ ಮನೋವೃತ್ತಿ. ದಯೆ ಮತ್ತು ಸೇವೆಯ ಸಾಕಾರ ಮೂರ್ತಿಯೇ ಆಗಿರುವ ಈ ಸ್ತ್ರೀಯು ನಮ್ಮೆಲ್ಲರಿಗಿಂತ ಸಾವಿರಪಾಲು ಉತ್ತಮ' ಎಂದು ಯೋಚಿಸುತ್ತಿದ್ದಳು

ಕೆಲವು ದಿನಗಳಿಂದ ಗಂಗೆಯು ಅಂಬೆಯೊಡನೆ ಮಲಗುತ್ತಿದ್ದಾಳೆ. ಇಷ್ಟು ದಿನಗಳಾದ ಮೇಲೆ ತನ್ನ ಕಷ್ಟದಲ್ಲಿ ಸಹಾನುಭೂತಿಯಿಂದಿರುವ ಒಬ್ಬ ಸಂಗಾತಿಯು ದೊರೆತಳಲ್ಲಾ ಎಂದು ಅವಳಿಗೆ ಆನಂದ! ಕಳೆದ ಐದು ವರುಷಗಳಿಂದ ಅವಳಿಗೆ ಯಾವಾಗಲೂ ಬೈಗಳು, ಗದರಿಕೆಗಳೇ ದೊರೆಯುತ್ತಿದ್ದುವು ಎಲ್ಲರೂ ಅವಳನ್ನು ಪಶುಗಿಂತ ಕೀಳಾಗಿ ಕಾಣುತ್ತಿದ್ದರು. ಅಂಬೆಯೊಬ್ಬಳೇ ಅವಳೊಡನೆ ನಗುತ್ತ ಮಾತನಾಡುತ್ತಿದ್ದವಳು. ಆದುದರಿಂದ ಅವಳು ಅಂಬೆಯ ಸೇವೆಯನ್ನು ಮನಃಪೂರ್ವಕವಾಗಿ ಮಾಡುತ್ತಿದ್ದಳು

"ಗಂಗಕ್ಕಾ, ಇಷ್ಟು ಒಳ್ಳೆಯವಳೂ, ನಿಷ್ಕಪಟಿಯೂ ಆಗಿರುವ ನೀನು ಖೂನಿಯನ್ನು ಹೇಗೆ ಮಾಡಿದೆಯೋ ನಾನು ತಿಳಿಯೆ. ನಿಜವಾಗಿಯೂ ನೀನು ಕೊಲೆ ಮಾಡಿದೆಯೋ ಅಥವಾ ಯಾರಾದರೂ ಹೊಟ್ಟೆಕಿಚ್ಚಿನಿಂದ ನಿನ್ನನ್ನು ಮೋಸಗೊಳಿಸಿದರೋ?"—ಒಂದು ದಿನ ಅಂಬೆ ಪ್ರಶ್ನಿಸಿದಳು

ಗಂಗೆ ಲಜ್ಜೆಯಿಂದ "ಕೇಳಿ ಏನು ಮಾಡುವೆಯಕ್ಕಾ? ದೇವರ ಇಚ್ಛೆ ಏನಿತ್ತೋ ಅದರಂತಾಯಿತು ನನ್ನ ಮೇಲೆ ಯಾರಿಗೂ ಹೊಟ್ಟೆ ಕಿಚ್ಚಿಲ್ಲ. ನಾನು ಎಲ್ಲವನ್ನೂ ಸ್ವೇಚ್ಛೆಯಿಂದಲೇ ಮಾಡಿದೆ!"

"ನಿನಗೆ ಯಾವ ಕಾರಣದಿಂದ ಸಿಟ್ಟು ಬಂತು?"

"ನನಗೆ ಸಿಟ್ಟು ಬರಲಿಲ್ಲವಕ್ಕ. ನೀನು ಒಪ್ಪುವುದಿಲ್ಲವಾದುದ

ರಿಂದ, ನಾನು ಎಲ್ಲವನ್ನೂ ಹೇಳಲೇಬೇಕಾಗಿದೆ. ನನ್ನ ಮನೆಯು ಜೋನ್ಪುರದ ಒಂದು ಹಳ್ಳಿಯಲ್ಲಿದೆ. ನನ್ನ ಪತಿಯು ಬಹಳ ರಸಿಕನಿದ್ದ ನನಗೆ ಮೂರು ಮಕ್ಕಳಾದ ಕೂಡಲೆ, ಅವನಿಗೆ ನನ್ನಲ್ಲಿ ಅರುಚಿಯುಂಟಾಯಿತು. ಅವನ ನಡೆ ನುಡಿಯು ಕೆಟ್ಟಿತು. ನಾನು ಎಷ್ಟು ಹೇಳಿದರೂ ಕೇಳಲಿಲ್ಲ. ಇನ್ನೊಂದು ಮದುವೆಯನ್ನಾದರೂ ಆಗಬಾರದೇಕೆ ಎಂದು ಹೇಳಿದೆ ನನಗಂತೂ ಮಕ್ಕಳಿವೆ, ಅವರನ್ನು ಸಾಕಿಕೊಂಡು ಕಾಲಕಳೆಯುವೆನು ಎಂದೆ. ಸರಿ, ಅವನು ಇನ್ನೊಬ್ಬಳನ್ನು ತಂದನು, ನಾನು ಸಂತೋಷದಿಂದ ಅವಳನ್ನು ಸ್ವಾಗತಿಸಿದೆನು. ನಾವಿಬ್ಬರೂ ಬಹಳ ಪ್ರೀತಿಯಿಂದಿದ್ದೆವು.

"ಆದರೆ ಆ ಸ್ತ್ರೀಯು ಇನ್ನೊಬ್ಬನನ್ನು ಮದುವೆಯಾಗಿದ್ದಳು. ಒಂದು ವರ್ಷದವರೆಗೆ ಅವಳು ನನ್ನ ಮನೆಯಲ್ಲಿ ಸುಖವಾಗಿದ್ದಳು ನಂತರ ತನ್ನ ಮೊದಲನೆ ಪತಿಯೊಡನೆ ಪುನಃ ಸಂಬಂಧವನ್ನು ಮಾಡಹತ್ತಿದಳು. ಸಮಯವನ್ನು ಸಾಧಿಸಿ ಆಗಾಗ ಅವನೊಡನೆ ಸೇರುತ್ತಿದ್ದಳು. ಒಂದು ದಿನ ನನ್ನ ಗಂಡನು ಅವರಿಬ್ಬರೂ ಏಕಾಂತರದಲ್ಲಿರುವುದನ್ನು ನೋಡಿ, ಅಲ್ಲಿಯೇ ಅವಳನ್ನು ಕೊಂದು ಬಿಟ್ಟನು ಈ ಕೊಲೆ ನಡೆದಾಗ ಒಳಗೆ ಬೀಗ ಹಾಕಿತ್ತಾದರೂ ನನಗೇನೋ ಸಂದೇಹವಾಯಿತು ನಾನು ಬಾಗಿಲನ್ನು ಬಲವಾಗಿ ಒದ್ದು, ಒಳಗೆ ಹೋಗಿ ನೋಡಿದೆ ನನ್ನ ಗಂಡನು ತನ್ನ ಕುತ್ತಿಗೆಗೆ ಉರುಲು ಸಿಕ್ಕಿಸಿಕೊಂಡು ನೇತಾಡುತ್ತಿದ್ದನು. ಆ ಸ್ತ್ರೀಯ ಶವವು ರಕ್ತರಂಜಿತವಾಗಿತ್ತು ನಾನು ಕೂಡಲೆ ಹಗ್ಗವನ್ನು ಬಿಚ್ಚಿ ಬಾಯಿಗೆ ನೀರು ಬಿಟ್ಟೆ. ಪ್ರಾಣವು ಹೋಗಿರಲಿಲ್ಲ. ನೀರು ಕುಡಿದ ಕೂಡಲೆ ಜ್ಞಾನ ಬಂತು. ಜ್ಞಾನ ಬಂದೊಡನೆಯೇ ನನ್ನ ಗಂಡನಿಗೆ ಸಿಟ್ಟು ಬಂತು.' ಇದೇಕೆ ಹೀಗೆ ಮಾಡಿದೆಯೇ? ಹೇಗೂ ಮರಣದಂಡನೆಯಾಗಿಯೆ ಆಗುವದು. ಈಗಲೇ ಪ್ರಾಣ ಹೋಗಿದ್ರೆ ಏನು ತಪ್ಪಾಗುತ್ತಿತ್ತು?' ಎಂದನು

ನಂತರವೂ ನಾನು ನನ್ನ ಪತಿಯನ್ನು ಎಂದಿನಂತೆ ಪ್ರೀತಿಸುತ್ತಲೇ ಇದ್ದೆನು. ಅವರಿಗೆ ಗಲ್ಲು ಶಿಕ್ಷೆಯಾದರೆ ಮಕ್ಕಳ ಗತಿ ಏನೆಂದು ಹೆದರಿದೆನು. ಗಂಡನ ಪ್ರಾಣವನ್ನು ಉಳಿಸುವುದಕ್ಕೆ ಒಂದೇ ಒಂದು ಉಪಾಯ–

ಕೊಲೆಮಾಡಿದವಳು ನಾನೇ ಎಂದು ಒಪ್ಪಿಕೊಳ್ಳುವುದು. ಅವಳು ನನ್ನ ಸವತಿಯಾಗಿದ್ದುದರಿಂದ ಪೋಲೀಸರಿಗೆ ನನ್ನ ಮಾತಿನಲ್ಲಿ ನಂಬಿಕೆಯೂ ಉಂಟಾಗುವುದು. ಆದರೆ ನನ್ನ ಗಂಡನು ಒಪ್ಪಲಿಲ್ಲ; ನಾನು ವಿಷಪಾನ ಮಾಡುವೆನೆಂದು ಹೆದರಿಸಿದೆ ಕೊನೆಗೆ ಅವನು ಒಪ್ಪಿದನು ಪೋಲೀಸರಿಗೆ ಸುದ್ದಿ ಹೋಯಿತು; ವಿಚಾರಣೆ ನಡೆಯಿತು; ನಾನು ಅಪರಾಧವನ್ನು ಸ್ವೀಕರಿಸಿದೆ. ನ್ಯಾಯಾಲಯದಲ್ಲಿ ವಿಚಾರಣೆ ನಡೆಯಿತು ನನಗೆ ಮರಣ ದಂಡನೆಯಾಗುವುದೆಂದು ಭಾವಿಸಿದ್ದೆ ಆದರೆ ನನ್ನ ಗಂಡನು ಬಹಳ ಹಣವನ್ನು ವೆಚ್ಚಮಾಡಿ ವಕೀಲರನ್ನಿಟ್ಟನು ಆದರಿಂದ ನನಗೆ ಮರಣ ದಂಡನೆಯು ತಪ್ಪಿ ಆಗಿನಿಂದ ಇಲ್ಲಿದ್ದೇನೆ; ಮೂರು ವರ್ಷಗಳ ಕೆಳಗೆ ನನ್ನ ಗಂಡನು ಸತ್ತು ಹೋದನು — ಮೂರು ಮಕ್ಕಳನ್ನೂ ಬಿಟ್ಟು ಹೋದನು".

ಅಂಬೆಯು ಗಂಗೆಯನ್ನಪ್ಪಿಕೊಂಡು ' ಅಕ್ಕ, ನೀನು ನಿಜವಾಗಿಯೂ ದೇವತೆಯು ನಾವು ನಿನ್ನ ಕಾಲುಗಳನ್ನು ತೊಳೆಯುವುದಕ್ಕೆ ಸಹ ಯೋಗ್ಯರಲ್ಲ" ಎಂದಳು.

೪

ಆರು ತಿಂಗಳುಗಳು ಕಳೆದುವು. ಸೆಂಟ್ರಲ್ ಜೈಲಿನ ಮುಂದೆ ದರ್ಶಕರ ಗುಂಪು ನಿಂತಿದೆ. ಕಾಂಗ್ರೆಸ್ ಸ್ತ್ರೀಯರಲ್ಲೆರೂ ಬಿಡುಗಡೆ ಮಾಡಲ್ಪಡುವರು. ಕಾಂಗ್ರೆಸ್ಸಿಗೂ ಸರಕಾರಕ್ಕೂ ಒಪ್ಪಂದವಾಗಿದೆ ಅಂಬೆಯ ಭಕ್ತರ ಸಂಖ್ಯೆಯು ಅಧಿಕವಾಗಿದೆ. ಎಲ್ಲರೂ ಒಬ್ಬರನ್ನೊಬ್ಬರು ಆಲಂಗಿಸಿಕೊಳ್ಳುತ್ತಿದ್ದಾರೆ ಗಂಗೆಯಂತೂ ಮೂರು ದಿನಗಳಿಂದ ಆಹಾರವನ್ನು ಬಿಟ್ಟು ಬಿಟ್ಟಿದ್ದಾಳೆ.

ಅಂಬೆಯು ಹೊರಡುವಾಗ ಗಂಗೆಯು ಅವಳ ಕಾಲಿಗೆ ಬಿದ್ದು ಅಳಲಾರಂಭಿಸಿದಳು. ಅಂಬೆಯೂ ಅತ್ತಳು. ಗಂಗೆಯು ಕೈಜೋಡಿಸಿ ಕಣ್ಣೀರು ತುಂಬಿಕೊಂಡು "ಅಕ್ಕ, ಆಗಿಂದಾಗ್ಯೆ ನನ್ನನ್ನು ವಿಚಾರಿಸಿಕೊಳ್ಳುತ್ತಿರುವೆಯಾ?"

ಅಂಬೆಯೆಂದಳು. ' ಅಕ್ಕಾ! ನಿನ್ನನ್ನು ಎಂದಾದರೂ ಮರೆಯುವೆನೆ?"

ಗಂಗೆಯು ಅವಳಿಗೆ ಹೂವಿನ ಹಾರವನ್ನು ಹಾಕುತ್ತ--"ನನ್ನ ನಮಸ್ಕಾರವನ್ನು ನಿನ್ನ ಪತಿಗೆ ಹೇಳು ನಿನ್ನ ಮಗುವಿಗೆ ಈ ಬೊಂಬೆ ಯನ್ನು ಕೊಡು" ಎಂದು ಕೊಟ್ಟು 'ಸಿ' ತರಗತಿಯ ಕೋಣೆಗೆ ಹೊರಟು ಹೋದಳು

ಅಂಬೆಯು ಅವಳ ಭಕ್ತಿಯನ್ನೂ ಪ್ರೇಮವನ್ನೂ ಕಂಡು ಮುಗ್ಧ ಳಾಗಿ ಹೋದಳು.

"ಅಂಬಾದೇವಿ, ಇನ್ನೂ ಹೊರಡುವುದಿಲ್ಲವೇ? ಆ ಹುಚ್ಚಿಯೊಡ ನೆಯೇ ಇರುವೆಯಾ?" ಎಂದೊಬ್ಬಳು ಎಚ್ಚರಿಸಿದಳು.

ಎರಡನೆಯವಳು ಮೋರೆ ತಿರುವುತ್ತಾ "ಅವಳು ನಿನ್ನನ್ನೂ ಹೇಗೆ ಬಲೆಗೆ ಹಾಕಿಕೊಂಡಳೋ ಕಾಣೆನಲ್ಲ. ನನಗಂತೂ ಅವಳ ಮುಖ ನೋಡಲಿಕ್ಕೂ ಮನಸ್ಸು ಬರೋದಿಲ್ಲ".

ಅಂಬೆಯು ಗದ್ಗತ ಕಂಠದಿಂದ ನುಡಿದಳು: "ಅವಳ ಹೆಸರಿನಲ್ಲಿ ಸಾಯುವ ತನಕ ಅಳುವೆನು. ತಂಗಿಯರೇ! ಅವಳು ಸ್ತ್ರೀಯಲ್ಲ, ಸ್ತ್ರೀರತ್ನ! ನಾವೆಲ್ಲರೂ ಇಷ್ಟು ಮಂದಿ ಇದ್ದೇವಲ್ಲಾ, ಎಷ್ಟು ಜನರಿಗೆ ಸೇವಾಮನೋಭಾವವಿತ್ತು? ನಾವೆಲ್ಲರೂ ಕೀರ್ತಿ, ದ್ವೇಷ, ಮೋಹ, ಲೋಭಗಳಲ್ಲಿ ಮುಳುಗಿ ಸ್ವಲ್ಪ ತೊಂದರೆಯನ್ನೂ ಸಹಿಸುತ್ತಿರಲಿಲ್ಲ ರಾಷ್ಟ್ರ ಸೇವಿಕೆಯರಾಗಿದ್ದೂ ಸ್ವಾರ್ಥವನ್ನು ಮರೆತಿರಲಿಲ್ಲ. ಅವಳು ಯಾರೊಡನೆಯಾದರೂ ಜಗಳವಾಡುತ್ತಿದ್ದುದನ್ನು ಯಾರಾದರೂ ನೋಡಿರುವಿರಾ? ನಮ್ಮ ಸೇವೆಯನ್ನು ಎಷ್ಟು ಪ್ರೀತಿಯಿಂದ ಮಾಡು ತ್ತಿದ್ದಳು! ನಮ್ಮ ಮಕ್ಕಳನ್ನು ಎಷ್ಟು ಮುದ್ದಿಸುತ್ತಿದ್ದಳು! ಎಂದಿಗೆ ತಾನೇ ಅದನ್ನು ಮರೆಯಲಾದೀತು?"

ಜಯಜಯಕಾರದೊಡನೆ ಮಹಿಳೆಯರು ಸೆರೆಮನೆಯನ್ನು ಬಿಟ್ಟರು. ಅಂಬೆಯ ಪತಿ ಪುತ್ರರೂ ಹೊರಗಡೆ ಇದ್ದರು. ಅಂಬೆಯು ಹೊರಕ್ಕೆ ಬಂದ ಕೂಡಲೆ ತನ್ನ ಮಗನನ್ನೆತ್ತಿ ಮುದ್ದಾಡಿದಳು.

3–4 ದಿನಗಳ ನಂತರ ಅಂಬೆಯು ಪತಿಯೊಡನೆ ಜೋನ್ಪುರಕ್ಕೆ

ಹೋದಳು ಗಂಗೆಯ ಮಕ್ಕಳನ್ನು ತನ್ನೊಡನೆ ಕರೆದುಕೊಂಡು ಬಂದು ಪೋಷಿಸಬೇಕೆಂದು ನಿಶ್ಚಯಮಾಡಿಕೊಂಡೇ ಹೊರಟಳು.

## ೧೪ ವಧು ಪರೀಕ್ಷೆ.

ನಿರ್ಮಲೆಯು ಬಹಳ ರೂಪವತಿಯಾದ ಹುಡುಗಿ ಜೊತೆಗೆ ಅತ್ಯಂತ ಸ್ವಾಭಿಮಾನಿ ವರದಕ್ಷಿಣೆಯು ಅವಮಾನಕರವೆಂದು ತಿಳಿದು, ಮರಣಪರ್ಯಂತ ಕುಮಾರಿಯಾಗಿಯೇ ಇರುವೆನೆಂದು ಸಂಕಲ್ಪಿಸಿದ್ದಾಳೆ. ಅವಳ ತಂದೆ ಕಾಳೀ ಪ್ರಸಾದರು ವಕೀಲರ ಬಳಿ ಗುಮಾಸ್ತರು. ಆದಾಯವು ವೆಚ್ಚಕ್ಕೆ ಸರಿಯಾಗಿದೆ. ಉಳಿತಾಯವಾಗುತ್ತಿಲ್ಲ. ನಿರ್ಮಲೆಯು ಪ್ರಾಪ್ತ ವಯಸ್ಕಳಾಗಿರುವುದು ಅವರ ಚಿಂತೆಗೆ ಕಾರಣವಾಗಿದೆ. ಹತ್ತೊಂಭತ್ತು ವರ್ಷವಾದರೂ ವಿವಾಹವಾಗದೆ ಇದ್ದರೆ ಜನರೇನೆಂದು ಕೊಳ್ಳುವರು? ತನ್ನ ವಿವಾಹದ ಬಗ್ಗೆ ಚಿಂತಿಸಬೇಡಿರೆಂದು ತನ್ನ ತಂದೆ ತಾಯಿಗಳಿಗೆ ಹೇಳಿ, ತಾನು ಅವಿವಾಹಿತಳಾಗಿಯೇ ಇರುವೆನೆಂದು ಮಾಡಿರುವ ಸಂಕಲ್ಪವನ್ನು ತಿಳಿಸಬೇಕೆಂದು ನಿರ್ಮಲೆ ಯೋಚಿಸುವಳು ಆದರೆ ಮನಸ್ಸಿನಲ್ಲೇ ಸಂಕೋಚಗೊಂಡು ಸುಮ್ಮನಾಗಿ ಬಿಡುವಳು.

ಒಂದು ದಿನ ನಿರ್ಮಲೆಯು ತಲೆನೋವಿನಿಂದ ತನ್ನ ಕೊಠಡಿಯಲ್ಲಿ ಮಲಗಿದ್ದಳು. ಕಾಳೀ ಪ್ರಸಾದರು ಬಂದು ತಮ್ಮ ಪತ್ನಿಯೊಡನೆ ಹೇಳಿದರು: “ಒಬ್ಬ ಹುಡುಗನೇನೋ ಸಿಕ್ಕಿದ್ದಾನೆ. ಆದರೆ ಮೂರು ಸಾವಿರ ಕೇಳುತ್ತಾನೆ. ಅಲ್ಲದೆ ಹುಡುಗಿಯನ್ನು ನೋಡಿ ಮಾತು ಕೊಡುವುದಾಗಿ ಹೇಳುತ್ತಿದ್ದಾನೆ. ಹುಡುಗನೇನೋ ಚನ್ನಾಗಿದ್ದಾನೆ. ಈ ಮನೆಯನ್ನು ಮಾರಿಬಿಡಲೇ ಎಂದು ಯೋಚಿಸುತ್ತಿದ್ದೇನೆ. 2-2½ ಸಾವಿರ ಸಿಕ್ಕಬಹುದು; ಉಳಿದುದನ್ನು ಯಾರಲ್ಲಾದರೂ ಸಾಲ ತೆಗೆದು ಕೊಳ್ಳುವೆನು. ಹೇಗಾದರೂ ಮಾಡಿ ತಲೆಹೊರೆಯನ್ನು ಇಳಿಸಲೇ ಬೇಕಲ್ಲ!”

ಪತ್ನಿಯು ತನ್ನ ದೈವವನ್ನು ನಿಂದಿಸುತ್ತ “ದೇವರು ಹೆಂಗಸರನ್ನು ಯಾಕಾಗಿ ಸೃಷ್ಟಿಸಿದನೋ ಕಾಣೆ. ಇರುವ ಒಂದು ಮನೆಯನ್ನೂ ಮಾರಿಬಿಟ್ಟರೆ, ಮುಂದೆ ಇರುವುದಕ್ಕೆ ಸಹ ಜಾಗವಿಲ್ಲವಂತಾ

ಗುವುದು ಹೆಣ್ಣು ಮಕ್ಕಳನ್ನು ಕೊಟ್ಟ ಮೇಲೆ ದೇವರು ಹಣವನ್ನು ಕೊಡಬೇಕು, ಇಲ್ಲವಾದರೆ ಎರಡನ್ನೂ ಕೊಡಲೇಬಾರದು." ಎಂದಳು.

ಕಾಳೀ ಪ್ರಸಾದರು "ಇರಲಿಕ್ಕೆ ಮನೆಯದೇಕೆ ಚಿಂತೆ? ಇನ್ನೆಷ್ಟು ದಿನ ಬದುಕಿರಬೇಕು? ಯಾವುದಾದರೂ ಒಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡರೆ ಸರಿ" ಎಂದರು

ನಿರ್ಮಲೆಯು ಎಲ್ಲವನ್ನೂ ಕೇಳಿದಳು. ತನ್ನ ನಿರುಪಾಯಸ್ಥಿತಿಯು ಇಷ್ಟು ಭಯಂಕರವಾಗಿ ಆಕೆಯ ಮುಂದೆ ಎಂದೂ ಬಂದಿರಲಿಲ್ಲ. ಬಹಳ ಹೆದರಿದಳು ತಾನು ಖಂಡಿತ ವಿವಾಹವಾಗುವುದೇ ಇಲ್ಲವೆಂದು ತಂದೆಗೆ ಹೇಳಿ ಬಿಡಬೇಕೆಂದು ಪುನಃ ಯೋಚಿಸಿದಳು. ಆದರೆ ಆ ದಿನವೂ ಬಾಯಿ ಬರಲಿಲ್ಲ ಈ ತೊಂದರೆಯಿಂದ ಪಾರಾಗುವುದು ಹೇಗೆ? ಎಲ್ಲಿಯಾದರೂ ಓಡಿ ಹೋಗಬಾರದೇಕೆ? ಇಲ್ಲ, ಇಲ್ಲ, ಓಡಿ ಹೋದರೆ ಕೆಟ್ಟ ಹೆಸರು ಬರುವುದು. ಜನರು ಮನಸ್ಸಿಗೆ ಬಂದಂತೆ ಮಾತನಾಡಿಕೊಳ್ಳುವರು. ಏನಾದರೂ ತಿಂದಾದರೂ ಏಕೆ ಸಾಯಬಾರದು? ಎಂತಹ ಅನರ್ಥ! ತಾನು ಹುಟ್ಟಿದ ಮನೆಯನ್ನೇ ಮಾರಿ ತನ್ನ ವಿವಾಹವಾಗಬೇಕೇ? ಎಂತಹ ನೀಚ ಮನೋವೃತ್ತಿಯ ಜನರಿದ್ದಾರೆ! ಹುಡುಗಿಯ ಕಾಲಿಗೆ ಹಣದ ಚೀಲವನ್ನು ಕಟ್ಟಿದ ವಿನಹ ಅವಳು ವರನೊಡನೆ ಇಡಲ್ಪಡಲಾರಳು! ಎಂತಹ ಸ್ವಾರ್ಥಿ ಜನರು! ಪರರ ಮನೆಯ ಹುಡುಗಿಯು ತಂದೆ ತಾಯಿಗಳನ್ನು ಬಿಟ್ಟು, ಇದನ್ನೇ ತನ್ನ ಸ್ವಂತ ಮನೆಯೆಂದು ಭಾವಿಸಿ, ಇಲ್ಲಿನವರ ಕಷ್ಟ ಸುಖಗಳಲ್ಲಿ ಭಾಗವಹಿಸಿ, ಮನೆಯ ಕೆಲಸಗಳನ್ನು ತನ್ನದೆಂದೇ ತಿಳಿದು ಮಾಡುವಳಲ್ಲ--ಎಂದು ವರನ ಪಕ್ಷದವರಿಗೆ ಸ್ವಲ್ಪವಾದರೂ ಸಂತೋಷವಾಗುವುದಿಲ್ಲವೇ? ವಿವಾಹದ ಪ್ರತಿಫಲವೆಲ್ಲ ಕನ್ಯೆಗೆ ಮಾತ್ರವೇ, ವರನಿಗಿಲ್ಲವೇ? ಸ್ತ್ರೀಯು ಇಂತಹ ಅವಮಾನವನ್ನು ಹೇಗೆ ತಾನೇ ಸಹಿಸುವಳು? ಇದನ್ನು—ಸಮಾಜದ ಈ ಅತ್ಯಾಚಾರವನ್ನು-ಏಕೆ ಕಾಲಿನಿಂದ ಒದ್ದು ಹೋಗಬಾರದು? ಸ್ತ್ರೀಯು ಅಬಲೆ ಎಂದು ಜನರು ಹೇಳುವರು ಆದರೆ ಅವಳು ಕೆಲಸಮಾಡಿ ಹೊಟ್ಟೆಯನ್ನು ತುಂಬಿಸಿಕೊಳ್ಳಲಾರಳೆ? ಪುರುಷರ ಮನೆಯಲ್ಲಿ ಅವಳು ಮಾಡದಿರುವ ಕೆಲಸವ್ಯಾವುದು? ಅತ್ಯಂತ ನೀಚ ಕೆಲಸವನ್ನು ಸಹ ಮಾಡುತ್ತಾಳೆ. ಅಲ್ಲದೆ ಕನ್ಯೆಯನ್ನು ನೋಡಬೇಕಂತೆ. ಕನ್ಯೆಯು

ತನ್ನ ರೂಪನ್ನು ತೋರಿಸಿ ವರನನ್ನು ಸಂತೋಷಗೊಳಿಸಬೇಕಂತೆ! ಇಲ್ಲವಾದರೆ ವರ ಮಹಾಶಯರು ಒಪ್ಪುವುದಿಲ್ಲ!

"ನಾಳೆ ಹೋಗಿ ನಿಶ್ಚಯಮಾಡಿಕೊಂಡು ಬನ್ನಿ"—ಎಂದು ನಿರ್ಮಲೆಯ ತಾಯಿಯ ಸೂಚನೆಯಾಯಿತು.

"ಈಗಲೇ ಹೋಗಬೇಕೆಂದಿದ್ದೇನೆ. ವರನ ತಂದೆಯೊಡನೆ ಇನ್ನೂ ಮಾತುಕತೆ ನಡೆದಿಲ್ಲ. ಮಾತುಕತೆ ನಡೆದ ಮೇಲೆ ವರ ದಕ್ಷಿಣೆಯಲ್ಲಿ ಸ್ವಲ್ಪ ಕಡಿಮೆಯಾದರೂ ಆಗಬಹುದು"— ಎನ್ನುತ್ತಾ ಕಾಳೀ ಪ್ರಸಾದರು ಹೊರಟರು.

— ೨ —

ವರನ ತಂದೆಯವರಾದ ಮಾಧವ ಪ್ರಸಾದರು ಹಿಂದಿನ ಮತ್ತು ಇಂದಿನ ಎರಡೂ ವಿಚಾರಗಳಿರುವ ಮನುಷ್ಯ ವಿವಾಹದಲ್ಲಿ ವರನ ಇಚ್ಛೆಯೇ ಮುಖ್ಯವೆಂದು ಒಪ್ಪುತ್ತಿದ್ದರು; ಇದು ಈಗಿನ ಕಾಲದ ವಿಷಯ. ಕನ್ಯೆಯ ತಂದೆಯು ತನ್ನ ದೇಹವನ್ನೇ ಅರೆದು ವರ ದಕ್ಷಿಣೆ ಅರ್ಪಿಸಬೇಕು; ಇದು ಇಂದಿನ ಮಾತು. ಅವರಿಗೆ ತಮ್ಮ ಕುಲೀನತೆಯ ಮೇಲೆ ಬಹಳ ಅಭಿಮಾನವಿತ್ತು. ಅದನ್ನು ಸುಲಭ ದರದಲ್ಲಿ ಮಾರಲು ಅವರಿಗೆ ಮನಸ್ಸಿರಲಿಲ್ಲ. ಸಂಜೆ ಅವರಲ್ಲಿಗೆ ಯಾರೋ ಬಂದವರು "ಕಾಳೀ ಪ್ರಸಾದರು ತಮ್ಮ ಬಳಿಗೆ ಅವರ ಮಗಳ ವಿಚಾರವಾಗಿ ಬರಲಿದ್ದಾರಂತೆ" ಎಂದರು.

"ಯಾವ ಕಾಳೀ ಪ್ರಸಾದ?"

"ಅವರೇ, ಲಾಯರ್ ಗುಮಾಸ್ತೆ"

"ಮನೆಯಲ್ಲಿ ಏನಾದರೂ ಸತ್ವವಿದೆಯಂತೇನು, ನನ್ನ ಸಂಗಡ ಮಾತಾಡಲು ಬರಲಿಕ್ಕೆ?"

"ಇಲ್ಲದೆ ಇದ್ದರೆ ಬರ್ತ್ತಾನೆಯೆ? ಸಂಪಾದನೆ ಬೇಕಾದಷ್ಟಿದೆ".

"ಎಷ್ಟು ಕೊಡ್ತಾನಂತೆ?

"ನಾನಂತೂ ಮೂರು ಸಾವಿರ ಎಂದು ಹೇಳಿದ್ದೆ. ಇಷ್ಟು ಹೇಳಿಯೂ ಬರುತ್ತಾನೆಂದ ಮೇಲೆ, ಇನ್ನೂ ಸ್ವಲ್ಪ ಹೆಚ್ಚಾಗಿಯೇ ಕೊಡಬಹುದು."

"ಹೌದು ಆಸೆ ಏನೋ ಇದೆ".

"ಇರಲಿ, ಎಲ್ಲಿ ಸ್ವಲ್ಪ ಕಸಗುಡಿಸಿ, ಖಾನ್ ಸಾಹೇಬರ ಮನೆ. ಯಿಂದ 3-4 ಕುರ್ಚಿಗಳನ್ನು ತನ್ನಿರಿ''

''ಅಷ್ಟರಲ್ಲೇ ಬಂದುಬಿಟ್ಟರಿ?"

"ಎಲ್ಲವನ್ನೂ ಖಾನ್ ಸಾಹೇಬರು ತೆಗೆದುಕೊಂದು ಹೋಗಿದ್ರೂ ಎಂದು ಹೇಳಿದರಾಯಿತು."

''ಮನೆಯೂ ಅಷ್ಟೇನೂ ಚೆನ್ನಾಗಿಲ್ಲವಲ್ಲ".

''ಅದಕ್ಕೂ ಉತ್ತರ ಸಿದ್ಧವಾಗೇ ಇದೆ— ಹಿರಿಯರು ಕಟ್ಟಿದ್ದು"

ಕಾಳೀಪ್ರಸಾದರು ಬಂದು ನಮಸ್ಕಾರ ಮಾಡಿದರು ಮಾಧವ ಪ್ರಸಾದರು ಸತ್ಕಾರವನ್ನೆಲ್ಲಾ ಮಾಡಿ ಮಾತಿನ ನಡುವೆ ಹೇಳಿದರು: ''ನಿಮ್ಮ ವಿಷಯವನ್ನೇ ಮಾತನಾಡ್ತಾ ಇದ್ದೆವು. ನಿಮ್ಮ ಮನೆಯೊಡನೆ ಸಂಬಂಧವನ್ನು ಬೆಳೆಸುವುದು ನನಗೆ ಹೆಮ್ಮೆಯ ವಿಷಯ. ಆದರೆ ಹುಡುಗ ಒಪ್ಪೋದಿಲ್ಲವಲ್ಲ".

''ಹಾಗನ್ನಬೇಡಿ ಸ್ವಾಮಿ, ಬಹಳ ಭರವಸೆಯಿಂದ ಬಂದಿದ್ದೇನೆ"— ಕಾಳೀಪ್ರಸಾದರೆಂದರು.

''ಈಗಿನ ಕಾಲದ ಹುಡುಗರು ಯಾರ ಮಾತನ್ನೂ ಕೇಳೋದಿಲ್ಲ ಏನ್ಮಾಡ್ಲಿ ಹೇಳಿ."

''ತಾವು ಏನು ಹೇಳಿದರೂ ಅರ್ಪಿಸಲು ಸಿದ್ಧನಿದ್ದೇನೆ''.

''ಅದಿರಲಿ, ಕೊಡೋದು ತಗೊಳ್ಳೋದು ನೀಚ ಕೆಲಸ. ಹುಡಗನೇ ಒಪ್ಪದೆ ಹೋದರೆ ಏನು ತಾನೇ ಮಾಡುವುದು? ನಿನ್ನೆ ಯಾರೋ 4 ಸಾವಿರದ ವರೆಗೂ ಬಂದಿದ್ದರು ಒಪ್ಪದೇ ಹೋದ. ತಾವೇ ಯೋಚಿಸಿ ನೋಡಿ".

''ತಮ್ಮಂತಹ ಮಹಾನುಭಾವರಿಂದಲೇ ಸಮಾಜದ ಕೀರ್ತಿ ಪ್ರತಿಷ್ಠೆಗಳು ಹೆಚ್ಚುವುವು".

ಅಷ್ಟರಲ್ಲಿ ಮಾಧವ ಪ್ರಸಾದರ ಮಗನಾದ ಗಂಗಾ ಪ್ರಸಾದನು ಅಲ್ಲಿಗೆ ಬಂದನು. ಕಾಲೇಜ್‌ನಲ್ಲಿ ವ್ಯಾಸಂಗ ಮಾಡುತ್ತಿದ್ದ ಯುವಕ.

ಮಾಧವಪ್ರಸಾದರು ಮಗನೊಡನೆ: ''ಮಗೂ, ಈ ಮಹಸೀಯರು

ತಮ್ಮ ಮಗಳನ್ನು ನಿನಗೆ ಕೊಡಬೇಕೆಂದು ಬಂದಿದ್ದಾರೆ. ನಿನ್ನ ಅಭಿಪ್ರಾಯವೇನು?"

"ನಿಮ್ಮ ಇಚ್ಛೆ ಅಪ್ಪಾ. ಆದರೆ ಹುಡುಗಿಯನ್ನು ಮಾತ್ರ ನಾನು ನೋಡಬೇಕು".

ಮಾಧವ ಪ್ರಸಾದರಿಗೆ ನಿರಾಶೆಯಾಯಿತು "ಇನ್ನೇನು ಹೇಳಬೇಕೋ ಹೇಳು ಮಗು ಹಿಂದಿನಿಂದ ನನಗೆ ತೊಂದರೆ ಕೊಟ್ಟೇಯೆ ಆ ಮೇಲೆ" ಎಂದರು. ಆದರೆ ಅವನು ಅದೆಲ್ಲವೂ ತಂದೆಗೇ ಸೇರಿದುದೆಂದೂ ಹುಡುಗಿಯನ್ನು ನೋಡುವುದು ಮಾತ್ರ ತನಗೆ ಸೇರಿದುದೆಂದು ಹೇಳಿ ಹೊರಟು ಹೋದನು.

ಕಾಳೀಪ್ರಸಾದರು ಉತ್ಸಾಹದಿಂದ ಹೇಳಿದರು: "ಯಾವಾಗ ಬೇಕಾದರೂ ಬಂದು ನೋಡಿಕೊಳ್ಳಬಹುದು ಹುಡುಗಿಯು ರೂಪವತಿಯೇ ಇದ್ದಾಳೆ"

ಮಾಧವ ಪ್ರಸಾದರು ಕೂಡಲೇ ಬಾಯಿ ಹಾಕಿ "ಅವನಿಗೆ ಒಪ್ಪಿಗೆಯಾದರೆ ನನ್ನದೇನು ಅಡ್ಡಿ? ನನಗೇನೂ ವರದಕ್ಷಿಣೆ ಬೇಡ ಆದರೆ ಹೆಂಗಸರು ಹಿಂದಿನಿಂದ ಬಂದ ಪದ್ಧತಿಯನ್ನು ಬಿಡಲು ಇಷ್ಟಪಡುವುದಿಲ್ಲ. ಅವರಿಗೆ ಕೇಳುವ ಮೊಬಲಗಿನಿಂದ ವಂಶ ಗೌರವವು ನಷ್ಟವಾಗದಂತಿರಬೇಕು. ನಿನ್ನೆಯೇ ನಾಲ್ಕು ಸಾವಿರವನ್ನು ನಿರಾಕರಿಸಿದ್ದನೆಂದು ಆಗಲೇ ಹೇಳಿದ್ದೆನಲ್ಲ" ಎಂದರು.

"ಸ್ವಾಮಿ, ದೇವರು ತಮಗೆ ಎಲ್ಲ ಐಶ್ವರ್ಯವನ್ನೂ ಅನುಗ್ರಹಿಸಿದ್ದಾನೆ. ನಾನು ತಮಗೆ ಕೊಡಲು ಯೋಗ್ಯನಲ್ಲ ನಾನು ತಮಗೊಬ್ಬ ದಾಸಿಯನ್ನು ಅರ್ಪಿಸುತ್ತೇನೆ- ಇರೋದೇ ಒಬ್ಬ ಮಗಳು. ಏನ್ಮಾಡಲಿ, ಬಹಳ ಬಡತನ!" ಮಾಧವರಾಯರು ನಿರ್ವಾಹವಿಲ್ಲದೆ ಹೇಳಿದರು

"ಹೋಗಲಿ. ಎರಡು ಸಾವಿರಕ್ಕಾದರೂ ಒಪ್ಪಿಕೊಂಡು ಬಿಡಿ ಎಷ್ಟು ಶ್ರಮವಾಗುತ್ತೋ ಪಾಪ. ಅದೂ ತಮಗೋಸ್ಕರ. ಇದಕ್ಕಾಗಿ ನಾನು ಮನೆಯವರೆಲ್ಲರೊಡನೆ ಜಗಳವಾಡಬೇಕಾಗಿದೆ".

ಕಾಳೀಪ್ರಸಾದರಿಗೆ ಬಹಳ ಸಂತೋಷವಾಯಿತು. ಇನ್ನು ಉಳಿದಿರುವುದು ವಧುವಿನ ಪರೀಕ್ಷೆ. ಅದಕ್ಕೂ ಒಂದು ದಿನವನ್ನು ಗೊತ್ತು

ಮಾಡಲಾಯಿತು ಪ್ರಸಾದರು ಬಹಳ ದೊಡ್ಡ ವಿಪತ್ತಿನಿಂದ ಪಾರಾದೆ ನೆಂದು ಮನೆಗೆ ಬಂದರು.

— ೩ —

ಇಂದು ನಿರ್ಮಲೆಯ ಪ್ರದರ್ಶನ. ವರನು ತನ್ನ ಮಿತ್ರನ ಸಹಿತ ನೋಡಲು ಬರುವನು ಸಂಗಾತಿಯರು ಅವಳನ್ನು ವಿಧ ವಿಧವಾಗಿ ಶೃಂಗರಿಸಿದ್ದಾರೆ. ಮನೆಯಲ್ಲಿ ಔತಣದ ಸಿದ್ಧತೆಗಳಾಗುತ್ತಿವೆ

ಮದುವೆಗೇನೇ ಸಿದ್ಧಳಾಗದೆ ಇದ್ದ ನಿರ್ಮಲೆಯು ವಧು ಪರೀಕ್ಷೆಗೇನೋ ಒಪ್ಪಿದಳು. ಜೊತೆಯವರು ಅವಳಿಗೆ ಮೋಹಿನೀ ಮಂತ್ರವನ್ನು ಉಪದೇಶಿಸುತ್ತಿದ್ದಾರೆ ಈ ರೀತಿ ತಲೆತಗ್ಗಿಸಿ ಕುಳಿತುಕೊಳ್ಳಬೇಕು, ಈ ರೀತಿ ಮಾತನಾಡಬೇಕು, ಈ ರೀತಿ ಲಜ್ಜೆಯಿಂದ ನೋಡಬೇಕು, ವರನು ನಿನ್ನ ಬಲೆಯಿಂದ ತಪ್ಪಿಸಿಕೊಂಡು ಹೋಗಲವಕಾಶವಿಲ್ಲದಂತೆ ನಿನ್ನ ಬಲೆಯನ್ನು ಬೀಸಬೇಕು, ತಿಳಿಯಿತೇ-ಎಂದೆಲ್ಲಾ ತರಬೇತಿ ನಡೆದಿದೆ.

ನಿರ್ಮಲೆಯು ಎಲ್ಲವನ್ನೂ ಕೇಳುತ್ತಿದ್ದಳು ಎಂತಹ ಅವಮಾನ, ಎಂತಹ ಅತ್ಯಾಚಾರ! ಹಣವನ್ನು ಕೊಟ್ಟೂ ಈ ಪೂಜೆಯೇ? ಅವಳೇನು ವೇಶ್ಯೆಯೇ, ರೂಪವೇ ಗುಣವಾಗುವುದಕ್ಕೆ? ಇವರು ಒಪ್ಪದಿದ್ದರೆ ಇನ್ನೊಬ್ಬನ ಮುಂದೆಯೂ ಇದೇ ಪ್ರದರ್ಶನವಾಗಬೇಕು! ಇರಲಿ"ಬರೋರೆಲ್ಲ ಬನ್ನಿ. ನಾನು ನಮ್ಮಪ್ಪನ ಮಗಳೇ ಆಗಿದ್ದರೆ, ನೀವು ಪುನಃ ಎಲ್ಲಿಯೂ ಮುಖ ತೋರಿಸದಂತೆ ಮಾಡುವೆನು ಸಾಯುವ ತನಕ ಮರೆಯಲಾರ ದಂತಹ ಶಿಕ್ಷೆ ವಿಧಿಸುವೆನು" ಎಂದುಕೊಂಡಳು.

"ಓಹೋ, ಬಂದ್ರು, ಬಂದೇ ಬಿಟ್ರು" ಎಂಬ ಶಬ್ದ ಕೇಳಿತು. ಗಂಗಾಪ್ರಸಾದನು ಇಬ್ಬರು ಮಿತ್ರರೊಡನೆ ಬಂದನು ನಿರ್ಮಲೆಯೂ ಕೂಡ, ಖಡ್ಗವನ್ನು ಹಿಡಿದು ಸಮರಕ್ಕೆ ಸಿದ್ಧಳಾಗಿರುವಳೋ ಎಂಬಂತಿದ್ದಳು.

ಕಾಫಿ, ತಿಂಡಿ ಆದ ನಂತರ ಬಂದವರು ನಿರ್ಮಲೆಯ ಕೋಣೆಗೆ ಹೋದರು. ನಿರ್ಮಲೆಯು ಗೆಳತಿಯರ ಸಂಗಡ ತಲೆಯನ್ನು ತಗ್ಗಿಸಿಕೊಂಡು ಕುಳಿತಿದ್ದಳು ಮಿತ್ರರು ಆಲೋಚನಾತ್ಮಕ ದೃಷ್ಟಿಯಿಂದ ನೋಡಿದರು. ಇಂಗ್ಲಿಷಿನಲ್ಲಿ ಏನೇನೋ ಮಾತನಾಡಿಕೊಂಡು ಹೊರ

ಡಲನುವಾದರು. ನಿರ್ಮಲೆಯು ಪರೀಕ್ಷೆಯಲ್ಲಿ ಉತ್ತೀರ್ಣಳಾದಳು. ಗಂಗಾಪ್ರಸಾದನು ಅವಳ ರೂಪುಲಾವಣ್ಯಗಳನ್ನು ಕಂಡು ಮುಗ್ಧನಾಗಿ ಹೋದನು. ಅಂತಹ ಸುಂದರಿಯು ದೊರೆತುದುದಕ್ಕಾಗಿ, ಮಿತ್ರರು ಅವನನ್ನು ಅಭಿನಂದಿಸಿದರು.

ಇದ್ದಕ್ಕಿದ್ದಂತೆಯೇ ನಿರ್ಮಲೆಯು ತಾನು ಹೊದೆದುಕೊಂಡಿದ್ದ ಸೆರಗನ್ನು ತೆಗೆದು ಉತ್ತೇಜಿತಳಾಗಿ ಈ ರೀತಿ ನುಡಿದಳು. "ಸ್ವಲ್ಪ ನಿಲ್ಲಿ. ನಾನೊಂದು ಮಾತನ್ನು ಕೇಳುವುದಿದೆ- ವರ ಮಹಾಶಯರು ನನ್ನನ್ನು ಒಪ್ಪಿದ್ದಕ್ಕಾಗಿ ನಾನು ಅವರಿಗೆ ಧನ್ಯವಾದಗಳನ್ನರ್ಪಿಸುತ್ತೇನೆ. ನನಗೆ ಅವರು ಈ ಗೌರವವನ್ನು ಕೊಟ್ಟುದು ನನ್ನ ಭಾಗ್ಯವೆಂದೇ ಭಾವಿಸುತ್ತೇನೆ ಆದರೆ ತಾವು ಒಪ್ಪುವಿರೋ ಇಲ್ಲವೋ ಕಾಣೆ—ವಿವಾಹವು ಸ್ತ್ರೀ ಪುರುಷರಿಬ್ಬರ ಒಪ್ಪಿಗೆಯಿಂದ ನಡೆಯಬೇಕಾಗಿದೆ."

ಕೋಣೆಯಲ್ಲಿ ವಿಚಿತ್ರ ವಾತಾವರಣವುಂಟಾಯಿತು. ಸಂಗಾತಿಯರು ವಿಸ್ಮಿತರಾಗಿ ನಿರ್ಮಲೆಯ ಮುಖವನ್ನು ನೋಡಲಾರಂಭಿಸಿದರು. ಇಷ್ಟೊಂದು ನಿರ್ಲಜ್ಜೆ! ರಾಮ ರಾಮ!

ಮಿತ್ರರೂ ಅವಾಕ್ಕಾದರು. ಈ ಪ್ರಶ್ನೆಯ ಉದ್ದೇಶವೇನೆಂಬುದನ್ನು ತಿಳಿದೂ ಅವರು ಅದನ್ನು ತಿಳಿಯದಂತೆ ನಟಿಸಿದರು.

ಒಬ್ಬ ಮಿತ್ರ—"ಹೌದು, ಹೌದು, ನಾವು ಅದನ್ನು ಒಪ್ಪುತ್ತೇವೆ."

ನಿರ್ಮಲೆ—"ಹಾಗೋ? ಹಾಗಾದರೆ ನನಗೆ ಇವರನ್ನು ಮದುವೆಯಾಗುವುದು ಒಪ್ಪಿಗೆ ಇಲ್ಲ"

ಮತ್ತೊಬ್ಬ ಮಿತ್ರ—"ಈ ರೀತಿ ಹೇಳಲು ಕಾರಣವೇನು?"

ನಿರ್ಮಲೆ- "ಯಾವ ವಿವಾಹವು ಸೌಂದರ್ಯದ ಆಧಾರದ ಮೇಲೆ ನಡೆಯುವುದೋ ಅದು ಸೌಂದರ್ಯದಂತೆಯೇ ಅಸ್ಥಿರವಾದುದೇ ಆಗುವುದು ಮತ್ತು ಯಾವ ಪುರುಷನ ಹೃದಯದಲ್ಲಿ ಸೌಂದರ್ಯದ ಮೋಹವು ಇಷ್ಟೊಂದು ಇರುವುದೋ, ಅಂತಹವನು ಯಾವ ಸ್ತ್ರೀಯ ವಿವಾಹಕ್ಕೂ ಎಂದಿಗೂ ಯೋಗ್ಯನಲ್ಲ"

ಗಂಗಾ ಪ್ರಸಾದನಿಗೆ ಒಂದೇ ಸಾರಿ ನೂರು ಪಾದರಕ್ಷಾ ಪ್ರಯೋಗವಾದಂತಾಯಿತು, ಆದರೆ ಮಿತ್ರರಲ್ಲಿ ಜ್ಞಾನೋದಯವಾಯಿತು.

ಚಿತ್ರದಲ್ಲಿ ಮತ್ತೊಂದು ಬದಿಯೂ ಇದೆ ಎಂಬುದು ಅವರಿಗೆ ಈಗ ತಿಳಿಯಿತು. ಈಗಸ್ತ್ರೀಯ ಮಾತನ್ನೂ ಕೇಳಬೇಕಾಗಿದೆ ಎಂಬುದುಮನವರಿಕೆಯಾಯಿತು.

"ಕಾಳೀಪ್ರಸಾದರೆಲ್ಲಿ? ನನ್ನನ್ನು ತಮ್ಮ ಮನೆಗೆ ಬರಮಾಡಿಕೊಂಡು ಅವಮಾನಗೊಳಿಸಿದ್ದಾರೆ" ಗಂಗಾ ಪ್ರಸಾದ ದುಡುಕಿನಿಂದ ಕೇಳಿದ

ನಿರ್ಮಲೆಯು ನಿಶ್ಶಂಕೆಯಿಂದ ಹೇಳಿದಳು: "ವಿವಾಹವಾಗುವವಳು ನಾನು ನೀವು ಈ ವಿಷಯದಲ್ಲಿ ಸ್ವತಂತ್ರರಿರುವಂತೆ ನಾನೂ ಸ್ವತಂತ್ರಳೇ ಆಗಿದ್ದೇನೆ. ನಿಮ್ಮ ಮತ್ತು ನನ್ನ ತಂದೆಯವರ ನಡುವೆ ಮಾತುಕತೆ ನಡೆಯುತ್ತಿದ್ದಾಗ ನೀವೇಕೆ ಮಧ್ಯೆ ಬಂದಿರಿ? ನಾನೇನೂ ನಿಮ್ಮನ್ನು ನೋಡುವುದಕ್ಕೆ ಬಂದಿರಲಿಲ್ಲವಲ್ಲ? ನೀವೇಕೆ ಬಂದಿರಿ ನನ್ನನ್ನು ಪರೀಕ್ಷೆ ಮಾಡಲು? ನೀವು ಸರ್ವಗುಣ ಸಂಪನ್ನರೆಂದೂ, ನಿಮ್ಮ ಸೇವೆ ಮಾಡುವುದು ನನ್ನ ಭಾಗ್ಯವೆಂದು ನಾನು ತಿಳಿದುಕೊಳ್ಳುವೆನೆಂದೂ ನೀವು ತಿಳಿದಿರಬಹುದು. ಈ ಅಹಂಕಾರ ಭಾವನೆಯನ್ನು ಬಿಡಿರಿ. ಕನಿಷ್ಟಪಕ್ಷ ನಿಮ್ಮಂತಹವರನ್ನಂತೂ ನಾನು ನನ್ನ ಪತಿಯನ್ನಾಗಿ ಮಾಡಿಕೊಳ್ಳಲಾರೆ. ನನ್ನ ಸ್ವಾಮಿಯಲ್ಲಿ ಏನೇನು ಗುಣವಿರಬೇಕೋ ಅದು ನಿಮ್ಮಲ್ಲಿಲ್ಲ"

ಒಬ್ಬ ಮಿತ್ರನು ಗಂಗಾಪ್ರಸಾದನೊಡನೆಂದನು: "ಅಣ್ಣಾ, ಈಕೆಯ ಕ್ಷಮೆಯನ್ನು ಬೇಡಿಕೊ; ಕಾಲಿಗೆ ಬಿದ್ದು ಬೇಡಿಕೊ! ಇಂತಹ ವಿಚಾರ ಶೀಲಳಾದ ವಿದುಷಿಯನ್ನು ಪಡೆಯುವುದು ನಿನ್ನ ಸೌಭಾಗ್ಯ!"

ಇನ್ನೊಬ್ಬ ನಿರ್ಮಲೆಯ ಕಡೆಗೆ ತಿರುಗಿ "ಅಕ್ಕ, ನಾವೆಲ್ಲರೂ ನಿನ್ನ ಕ್ಷಮೆಯನ್ನು ಬೇಡುತ್ತೇವೆ ನಮ್ಮಿಂದ ಮಹಾಪರಾಧವಾಯಿತು. ಸ್ವಲ ಯೋಚಿಸಿ ನೋಡಿ, ಎರಡು ಮನೆಗಳಲ್ಲಿಯೂ ಮದುವೆಯ ಸಿದ್ಧತೆಗಳು ನಡೆಯುತ್ತಿವೆ. ಈಗ ವಿಘ್ನವುಂಟಾದರೆ, ಎಷ್ಟು ಕೆಟ್ಟ ಹೆಸರು ಬರುವುದೆಂಬುದನ್ನು ನೋಡಿಕೊಳ್ಳಿ".

ಗಂಗಾಪ್ರಸಾದನು ಇನ್ನೂ ಸುಮ್ಮನೆ ನಿಂತಿದ್ದನ್ನು ಕಂಡುಹೀಗೆಂದಳು: "ನನಗೆ ಹೊಟ್ಟೆ ಬಟ್ಟೆಗೆ ಕೊಡುವೆನೆಂದು ನೀವು ತಿಳಿದಿರಬಹುದು. ನಿಮ್ಮ ಪತ್ನಿಯಾಗಲು ನಾನೆಷ್ಟು ತ್ಯಾಗ ಮಾಡಬೇಕೆಂಬುದನ್ನು ಮಾತ್ರ ನೀವು ತಿಳಿದಂತೆ ತೋರುವುದಿಲ್ಲ. ನಾನು ನನ್ನ ತಂದೆ ತಾಯಿಗಳನ್ನು

ಬಿಟ್ಟು ನಿಮ್ಮ ಮನೆಗೆ ಬಂದು ನಿಮ್ಮ ಸೇವೆ ಮಾಡಬೇಕು ಎಲ್ಲರು ಹೇಳಿದಂತೆ ಕೇಳಬೇಕು ಎಲ್ಲರಿಗೂ ಅಡಿಗೆ ಮಾಡಿ, ಎಲ್ಲರೂ ಊಟ ಮಾಡಿದ ನಂತರ ಮಲಗಬೇಕು—ಇದೇ ನನ್ನ ಧರ್ಮ! ಪುರುಷನು ಕನ್ನೆಯನ್ನು ಮದುವೆಯಾಗಿ ಅವಳ ಉದ್ಧಾರ ಮಾಡುವನಂತೆ! ಹಾಗಲ್ಲ, ಕನ್ನೆಯೇ ಪುರುಷನನ್ನು ವಿವಾಹವಾಗಿ ಅವನನ್ನು ಉದ್ಧಾರ ಮಾಡುವವಳು. ಇದೇ ನನ್ನ ಅಭಿಪ್ರಾಯ!''

ಗಂಗಾ ಪ್ರಸಾದನು ನಿರಾಶನಾದ. ಅವರೆಲ್ಲರೂ ಅಲ್ಲಿಂದ ಹೊರಟು ಬಿಟ್ಟರು.

ಹಿಂದಿರುಗಿ ಬರುವಾಗ ಹಾದಿಯಲ್ಲಿ ಮೂವರು ಮಿತ್ರರೂ ಚರ್ಚೆ ಮಾಡಿಕೊಳ್ಳಲಾರಂಭಿಸಿದರು "ಗಂಗಾ, ಎಂತಹ ತಪ್ಪು ಮಾಡಿದೆ ನೀನು? ನೀನು ಸ್ವಲ್ಪ ಮೆತ್ತಗಾಗಿದ್ದರೆ, ಅವಳು ಒಪ್ಪಿಕೊಂಡು ಬಿಡುತ್ತಿದ್ದಳು.''

''ಸದ್ಯ ಸುಮ್ಮನಿರಪ್ಪ! ಅಂತಹ ಸ್ತ್ರೀ ನನಗೆ ಬೇಡ ನಿಜವಾಗಿ ಹೇಳಲೇ? ಅವಳ ದೃಷ್ಟಿಯಲ್ಲಿ ನಾನೊಬ್ಬ ಕತ್ತೆ. ಅಂತಹವಳನ್ನು ಮದುವೆಯಾಗುವುದರಿಂದ ಮರಣಪರ್ಯಂತ ಗುಲಾಮಗಿರಿಯನ್ನು ಕೊಂಡಂತಾಗುವುದು!"—ಗಂಗಾ ಪ್ರಸಾದನ ಉತ್ತರ

ಅವಳ ಫೋಟೋ ತರಿಸಿಕೊಳ್ಳದೆ ನೀನೇ ಏಕೆ ಹೋಗಬೇಕಾಗಿತ್ತೋ!"

''ಗಾಯದ ಮೇಲೆ ಉಪ್ಪನ್ನು ಹಾಕಬೇಡಿ, ಸುಮ್ನಿರಿ. ನೀವಾದ್ರೂ ಸಲಹೆಕೊಡಬಾರದಿತ್ತೆ?"

ಮಾರನೆ ದಿನ ನಗರದಲ್ಲೆಲ್ಲ ಈ ಪ್ರಕರಣದ ಸುದ್ದಿಯು ಹರಡಿತು. ಹಾಸ್ಯಮಾಡುವವರಿಗೆ ಒಳ್ಳೆ ಸಾಮಗ್ರಿ ದೊರೆಯಿತು. ಎಲ್ಲರೂ ಬಂದು ಗಂಗಾಪ್ರಸಾದನಲ್ಲಿ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಗಂಗಾ ಪ್ರಸಾದನು ಮನೆ ಬಿಟ್ಟು ಹೊರಕ್ಕೆ ಬರುವುದೇ ಕಷ್ಟವಾಯಿತು. ಒಂದು ದಿನ ರಾತ್ರಿ ಮನೆಯಿಂದ ಹೊರಟು ನಿಂತಿದ್ದನಂತೆ. ಪುನಹ ಅವನನ್ನು ಯಾರೂನೋಡಲೇ ಇಲ್ಲ.

ನಿರ್ಮಲೆಯು ಅವಿವಾಹಿತಳಾಗಿಯೇ ಇರುವುದಾಗಿ ನಿಶ್ಚಯಿಸಿದ್ದಾಳೆ. ತನ್ನ ಸಹೋದರಿಯರಿಗೆ ಚಿಕಿತ್ಸೆ, ಸೇವೆಗಳನ್ನು ಮಾಡುತ್ತ ತನ್ನ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುತ್ತಿದ್ದಾಳೆ.

---

# ಲೇಖಿಕೆಯ ಪರಿಚಯ

ಈ ಪುಸ್ತಕದ ಲೇಖಿಕೆಯರಾದ ಶ್ರೀಮತಿ ಶಿವರಾಣಿ ದೇವಿಯವರು ಹಿಂದೀಭಾಷೆಯ ಯಶಸ್ವಿ ಕತೆಗಾರರಾದ ಶ್ರೀ ಪ್ರೇಮಚಂದ್ರಜೀಯವರ ಧರ್ಮಪತ್ನಿಯವರು. ಸಾಹಿತ್ಯದ ಒಂದೇ ಕ್ಷೇತ್ರದಲ್ಲಿ ತಲ್ಲೀನತೆಯಿಂದ ಕೆಲಸ ಮಾಡುವ ಇಂತಹ ಆದರ್ಶ ದಂಪತಿಗಳು ಜಗತ್ತಿನಲ್ಲಿ ಅತಿ ವಿರಳ. ಹಿಂದಿ ಭಾಷೆಯ ಕಥಾ ಸಾಹಿತ್ಯ ಕ್ಷೇತ್ರದಲ್ಲಿ ಉಲ್ಲೇಖನೀಯವಾದ ಕೆಲಸವನ್ನು ಮಾಡಿದವರೆಂದರೆ ಈ ದಂಪತಿಗಳೇ. ಹಿಂದಿಸಾಹಿತ್ಯದ ಇತಿಹಾಸದಲ್ಲಿ ಈ ವಿಷಯಕ್ಕೆ ಬಹಳ ಮಹತ್ವವಿದೆ ಇರಲಿ.

ಈ ಪುಸ್ತಕದ ಹೆಸರು ಅಕ್ಷರಶಃ ಸಾರ್ಥಕವಾಗಿದೆ; ಏಕೆಂದರೆ ಇದರಲ್ಲಿರುವ ಕಥೆಗಳಲ್ಲಿ ನಾರೀ ಹೃದಯದ ವಾಸ್ತವಿಕ ಚಿತ್ರವು ಅಂಕಿತ ವಾಗಿದೆ- ಇದನ್ನು ನೋಡಿದರೆ ಸ್ತ್ರೀಯರ ಮನೋವೃತ್ತಿಯ ಯಥಾರ್ಥ ಚಿತ್ರವನ್ನು ರಚಿಸುವುದರಲ್ಲಿ ಸ್ತ್ರೀಯರಿಗೆ ದೊರೆಯುವ ಸಫಲತೆ ಪುರುಷ ರಿಗೆ ದೊರೆಯುವುದಿಲ್ಲವೆ ಎಂಬ ವಿಚಾರವು ಸಹಜವಾಗಿ ಹುಟ್ಟುವುದು; ವಿಷಯವಿರುವುದೂ ಹೀಗೆಯೇ. ಶ್ರೀ ಪ್ರೇಮಚಂದ್ರಜಿಯವರು ಸ್ವತಃ ಒಬ್ಬ ಸಫಲರಾದ ಕತೆಗಾರರಾಗಿದ್ದರು; ಆದರೂ ನಾರೀ ಹೃದಯದ ಚಿತ್ರ ವನ್ನು ಚಿತ್ರಿಸುವುದರಲ್ಲಿ ಅವರು ತಮ್ಮ ಪತ್ನಿಗಿಂತ ಮುಂದೆ ಹೋಗಿದ್ದಂತೆ ತೋರುವುದಿಲ್ಲ- ಈ ಮಾತಿಗೆ ಪುಷ್ಟಿಯು ಈ ಪುಸ್ತಕದ ಅನೇಕ ಕಡೆ ಗಳಲ್ಲಿ ದೊರೆಯುವುದನ್ನು ವಾಚಕರು ಕಾಣಬಹುದು. ಆದರೆ ನಿಜ ವಾಗಿ ಕೇಳಿದರೆ ಇದು ಶ್ರೀ ಪ್ರೇಮ ಚಂದ್ರಜಿಯವರಿಗೂ ಕೂಡ ಬಹಳ ಹೆಮ್ಮೆ ಮತ್ತು ಗೌರವದ ವಿಷಯವೇ ಸರಿ.

ಹಿಂದಿಯಲ್ಲಿ ಕತೆಗಳನ್ನು ಬರೆಯುವ ಅಲ್ಪಸ್ವಲ್ಪ ಮಂದಿ ಮಹಿಳೆ ಯರಲ್ಲಿ, ಈ ಪುಸ್ತಕದ ಲೇಖಿಕೆಯರ ಸ್ಥಾನವು—ಸುಬೋಧ ಭಾಷೆ ಮತ್ತು ಸ್ವಾಭಾವಿಕ ವರ್ಣನಾ ಶೈಲಿಯ ದೃಷ್ಟಿಯಲ್ಲಿ ಬಹಳ ಮೇಲ್ತ ರದ್ದೆಂದು ಪ್ರತೀತವಾಗುತ್ತದೆ- ಇವರಲ್ಲಿ ಶ್ರೇಷ್ಠ ಕಲ್ಪನೆಯಾಗಲಿ, ವಾಗಾಡಂಬರವಾಗಲಿ ಎಲ್ಲಿಯೂ ಇಲ್ಲ- ಇವರಿಗೆ ಭಾರತೀಯ ಸಭ್ಯತೆ ಮತ್ತು ಸಂಸ್ಕೃತಿ ಇವುಗಳ ರಕ್ಷಣೆಯ ವಿಚಾರವು ಸಂಪೂರ್ಣವಾಗಿದೆ.

ಇವರು ಸಮಾಜದ ಮರ್ಯಾದೆಯನ್ನು ಚೆನ್ನಾಗಿ ಪರಿಪಾಲಿಸಿದ್ದಾರೆ- ಕ್ರಾಂತಿಕಾರಿಣಿಯಾಗುವುದಕ್ಕಿಂತಲೂ, ಸದ್ಗೃಹಸ್ಥರ ಆದರ್ಶ ಗೃಹಿಣಿ ಯಾಗುವ ಚಿಂತೆಯೇ ಇವರಿಗೆ ಹೆಚ್ಚಾಗಿದೆ. ಆದುದರಿಂದಲೇ ಈ ಪುಸ್ತಕದಲ್ಲಿ ದೇಶ ಮತ್ತು ಸಮಾಜಕ್ಕೆ ಸಂಬಂಧಿಸಿದ ವಿಚಾರಗಳು ಬಹಳ ಶೀತಳವೂ, ಸೌಮ್ಯವೂ ಮತ್ತು ಕಲ್ಯಾಣಕರವೂ ಆಗಿವೆ

ಈ ಸಂಗ್ರಹದಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ಅನೇಕ ಸಮಸ್ಯೆಗಳಿಗೆ ಸಮಾಧಾನವು ದೊರೆಯುತ್ತದೆ. ಸ್ತ್ರೀಯರ ಸಾಹಸ, ತ್ಯಾಗ ಸತೀತ್ವ, ಸ್ವದೇಶಾನುರಾಗ, ಸೇವಾವ್ರತ, ಆತ್ಮನಿಗ್ರಹ ಮುಂತಾದುವುಗಳನ್ನು ಚಿತ್ರಿಸುವಾಗ, ಸಿದ್ಧ ಲೇಖಿಕೆಯವರ ಅನುಭೂತಿ, ಕುಶಲತೆ ಮತ್ತು ಸಫಲತೆಗಳು ಎದ್ದು ಕಾಣುತ್ತಿವೆ ನಾರೀ ಹೃದಯ ದೌರ್ಬಲ್ಯ ಮತ್ತು ದೃಢತೆಗಳನ್ನು ವ್ಯಕ್ತಗೊಳಿಸುವುದರಲ್ಲಿ ಲೇಖಿಕೆಯವರು ಅದ್ಭುತ ಕುಶಲತೆಯನ್ನು ಪ್ರದರ್ಶಿಸಿದ್ದಾರೆ.

ನನಗೆ ಇದರಲ್ಲಿರುವ ಕಥೆಗಳು ಬಹಳ ಒಪ್ಪಿಗೆಯಾದುವು ಸವತಿ, ತಾಯಿ, ಬಂಧನ ಬಲಿದಾನ ಎಂಬ ಕಥೆಗಳು ಅತ್ಯಂತ ಪ್ರಭಾವಶಾಲಿ ಯಾಗಿವೆ- ಇಂತಹ ಕತೆಗಳಿಂದ ಸಮಾಜಕ್ಕೆ ಬಹಳ ಮಂಗಳವಾಗು ತ್ತದೆ ಭಾಷೆಯ ಸರಳತೆ, ಸರಸತೆ, ಭಾವನೆಯ ಪವಿತ್ರತೆ ಮತ್ತು ಸ್ಪಷ್ಟತೆ, ಘಟನೆಗಳ ಸ್ವಾಭಾವಿಕತೆ ಮತ್ತು ರೋಚಕತೆ—ಇವೇ ಈ ಕತೆಗಳಲ್ಲಿನ ವೈಶಿಷ್ಟ್ಯಗಳು ಆದುದರಿಂದ ಇವುಗಳ ಲೋಕಪ್ರಿಯ ತೆಯು ನಿಜವಾಗಿಯೂ ಹೆಚ್ಚುವುದರಲ್ಲಿ ಸಂದೇಹವಿಲ್ಲ-

ಸ್ತ್ರೀಯರು ಇದನ್ನು ಓದಿ ಅನೇಕ ಉಪದೇಶಗಳೊಡನೆ ಸ್ವಾಭಿ ಮಾನ ಮತ್ತು ಆತ್ಮವಿಶ್ವಾಸಗಳನ್ನು ಪಡೆಯುವರೆಂದೂ ಪುರುಷರು ಇದನ್ನು ಓದಿ ನಾರೀ ಜಾತಿಯ ತೇಜಸ್ಸು ಮತ್ತು ಶಕ್ತಿಗಳೆದುರಿನಲ್ಲಿ ಸಮ್ಮಾನಪುರಸ್ಸರವಾಗಿ ನತಮಸ್ತಕರಾಗುವರೆಂದೂ ನನಗೆ ಸಂಪೂರ್ಣ ನಂಬಿಕೆ ಇದೆ. ತಥಾಸ್ತು.

ಕಾಶಿ<br>ಜುಲೈ 1932

ಶಿವಪೂಜನ ಸಹಾಯ.

## ಕಥೆ, ಕಾದಂಬರಿ, ನಾಟಕ, ಚಿತ್ರ, ಪ್ರಬಂಧಾದಿ ನಾನಾ ಬಗೆಯ ಪುಸ್ತಕಗಳು.

### ಕಿರಿಯರಪ್ರಪಂಚದ ಪ್ರಕಟಣೆಗಳು.

| | | | |
|---|---|---|---|
| ಸ್ವತಂತ್ರ ಜೀವನೋಪಾಯ | 0 | 3 | 0 |
| ಸಂಶಯ ಪಿಶಾಚಿ | 0 | 10 | 0 |
| ನಾಡಕತೆಗಳು | 0 | 4 | 0 |
| ಕುಶಲವ | 0 | 8 | 0 |
| ಕಾವ್ಯಸಾಮ್ರಾಜ್ಯ | 1 | 8 | 0 |
| ಮಧುವನ | 3 | 0 | 0 |
| ಮುಂದಿನ ದೇವರು | 0 | 4 | 0 |
| ವ್ಯಭಿಚಾರಿಣಿ ಯಾರು | 1 | 4 | 0 |
| ಹೆಂಡ್ತಿ ಗಂಡನಾದರೆ | 0 | 4 | 0 |
| ಪುರುಷ ವಧು | 0 | 4 | 0 |
| ಸನ್ಯಾಸಿಯ ಸೋಗಿನಲ್ಲಿ | 0 | 12 | 0 |
| ನಂದಾದೀಪ | 1 | 0 | 0 |
| ದೇಶಭಕ್ತ | 1 | 8 | 0 |
| ಪ್ರೇಮವಿಜಯ | 1 | 0 | 0 |
| ರಂಗಭೂಮಿ | 0 | 10 | 0 |
| ಸೇವಾಪಥ | 0 | 8 | 0 |
| ನಾರೀ ಹೃದಯ | I | 8 | 0 |
| ಭಾರತೀಯ ಕಥೆಗಳು | 1 | 12 | 0 |
| ಪ್ರಕಾಶ | 2 | 8 | 0 |
| ಮೂರು ಪ್ರಹಸನಗಳು | 1 | 0 | 0 |
| ಅನ್ನದೇವರು ಮತ್ತಿತರ ಕತೆಗಳು | 1 | 0 | 0 |
| ಭಾರತದಲ್ಲಿ ಜಾತಿಭೇದ | 1 | 0 | 0 |
| ವಿಷ್ಣುವಿನ ದಶಾಪರಾಧಗಳು | 0 | 12 | 0 |
| ಆಕಾಶ ಗಂಗೆ | 2 | 4 | 0 |
| ಸ್ವಾತಂತ್ರ್ಯವೀರ ಸಾವರಕರರು | 1 | 4 | 0 |
| ಜೀವನ ಸಂಗ್ರಾಮ | 1 | 8 | 0 |
| ಕದಂಬ | 1 | 4 | 0 |
| ಕವಿತಾಕಾಮಿನಿ | 2 | 0 | 0 |
| ಸ್ವರಾಜ್ಯ ವಿಜಯ | 0 | 8 | 0 |
| ಸಪ್ತಸಾಗರ | 0 | 12 | 0 |
| ಜಮೀನ್ದಾರ | 1 | 12 | 0 |

## ಅಂತರಂಗದ ಪ್ರಕಟಣೆಗಳು:

| | | | |
|---|---|---|---|
| ಬಿರುದಾವಳಿ | 0 | 3 | 0 |
| ಆ ಸುದ್ದಿ | 0 | 4 | 0 |
| ಹೈದರಾಬಾದ್ ವಿಜಯ | 0 | 4 | 0 |
| ಸೆರೆಯಾಳು | 0 | 7 | 0 |
| ಗಾದೆಯ ಗಾಂಧಿ | 0 | 3 | 0 |
| ಶಾಂತಿಯ ಮಡಲಿನಲ್ಲಿ | 0 | 3 | 0 |
| ಬಲಿಪೀಠದಲ್ಲಿ | 0 | 5 | 0 |
| ಅಗಲಿದ ಅಕ್ಕ ಸರೋಜಿನಿ | 0 | 3 | 0 |
| ನನ್ನ ಹೆಂಡತಿ | 0 | 3 | 0 |
| ಪುಣ್ಯಫಲ | 0 | 4 | 0 |
| ಸುಖದದಾರಿ | 0 | 3 | 0 |
| ಸುಕಾಂತ | 0 | 3 | 0 |
| ಪಂಚಮುಖಿ | 0 | 5 | 0 |
| ಜಾತಿಭೂತಕ್ಕೆ ಬಲಿ | 0 | 3 | 0 |
| ಜನಸೇವೆಯ ಸೋಗಿನಲ್ಲಿ | 0 | 3 | 0 |
| ನಾ ಕಂಡ ಅವಳು | 0 | 3 | 0 |
| ತ್ರಿವೇಣಿ | 0 | 3 | 0 |
| ನಿಲುವಂಗಿ | 0 | 4 | 0 |
| ಬಾಡಿಗೆಯ ಮನೆ | 0 | 3 | 0 |
| ವರ್ತಮಾನಕಾಲದ ನಾಲ್ವರು | | | |
| ಮಹಾನುಭಾವರು | 0 | 4 | 0 |
| ದೇವರ ನಾಮ ಮತ್ತು ಸಾಧನೆ | 0 | 3 | 0 |
| ಎರಡು ಕತೆಗಳು | 0 | 4 | 0 |
| ಸರಸ–ವಿರಸ | 0 | 3 | 0 |
| ಹೃದಯೇಶ್ವರಿ | 0 | 4 | 0 |
| ವಿವಿಧ ವಿಷಯ ಕೋಶ ಭಾಗ ೧,೨ | 0 | 6 | 0 |
| ನುಡಿಮುತ್ತುಗಳು ೧, ೨, ೩ | 0 | 12 | 0 |
| ಕುಲವಿಲ್ಲದ ಹೆಣ್ಣು | 2 | 0 | 0 |
| ತವರು ಮನೆಯಿಂದ | 0 | 4 | 0 |
| ಭಾಗ್ಯಲಕ್ಷ್ಮಿ | 1 | 4 | 0 |
| ಯುಗವಾಣಿ | 0 | 8 | 0 |
| ಸ್ತ್ರೀ ಹೃದಯ | 0 | 4 | 0 |
| ದ್ವೇಷ | 0 | 3 | 0 |
| ಎರಡು ಏಕಾಂಕ ನಾಟಕಗಳು | 0 | 4 | 0 |
| ಪ್ರಜಾಪ್ರಭುತ್ವವನ್ನು ಕುರಿತು | 0 | 8 | 0 |

| | | | |
|---|---|---|---|
| ಕಲಾವಿದನ ದಿನಚರಿ | 0 | 3 | 0 |
| ಆಧುನಿಕ ಭಾರತ | 0 | 4 | 0 |
| ಕಾಲವೇ ಬದಲಾಗಿದೆ | 0 | 4 | 0 |
| ಭಾರತದ ಸಾಹಿತ್ಯ ಕಲೆಗಳು | 0 | 4 | 0 |
| ಸ್ತ್ರೀಸ್ವಾತಂತ್ರ್ಯ ಬೇಕೆ? | 0 | 4 | 0 |
| ಹಂಬಲ | 0 | 4 | 0 |
| ಭಾರತಚಿತ್ರದ ಅಂಚೆಚೀಟುಗಳು | 0 | 3 | 0 |
| ತ್ರಿಶೂಲ | 0 | 5 | 0 |
| ಪುಸ್ತಕಪುರಾಣ | 0 | 4 | 0 |
| ಹಳ್ಳಿಯಲ್ಲಿ ನಡೆದ ನಾಟಕ | 0 | 3 | 0 |
| ನೆರೆಯ ಗಾಂಧಾರ | 0 | 3 | 0 |
| ಮಾತಿನಯುಗದ ಮಹಾಪ್ರಭಾವ | 0 | 3 | 0 |
| ವಿಜ್ಞಾನದ ಬೆಳವಣಿಗೆ | 0 | 4 | 0 |
| ಡಾ। ಹರ್ಡೀಕರ್ | 0 | 5 | 0 |
| ತೆಂಗಿನ ತವರು | 0 | 6 | 0 |
| ಪ್ರಾಯಶ್ಚಿತ್ತ | 0 | 3 | 0 |
| ಪ್ರಭಾ | 0 | 3 | 0 |
| ಶವಗಳ ಸಾಗಾಟ | 0 | 12 | 0 |
| ಸ್ವಪ್ನಲೋಕ | 0 | 6 | 0 |
| ಮನೆಹೊರಗಿನಮಹಾಜೀವಿಗಳು | 0 | 5 | 0 |
| ಘಂಟಮಾರಾ ೪ಭಾಗಗಳು | 2 | 0 | 0 |
| ಮಾರ್ಪಾಟ | 0 | 5 | 0 |
| ಭಾರತದ ರಾಷ್ಟ್ರಗೀತೆ | 0 | 3 | 0 |
| ನಮ್ಮ ಬಹು ದೊಡ್ಡ ಶತ್ರು | 0 | 4 | 0 |
| ಕೈಲಾಸ | 0 | 3 | 0 |
| ಚೌತಿ | 0 | 4 | 0 |
| ಕತ್ತು ಕೊಯ್ದವರಾರು? | 0 | 6 | 0 |
| ಸಮಾಜದ ಅಗ್ನಿಕುಂಡ | 0 | 4 | 0 |
| ಬೆಳ್ಳಿಹಬ್ಬ | 0 | 4 | 0 |
| ಉಷಾ | 0 | 4 | 0 |
| ವಿಧಿಲೀಲೆ | 0 | 4 | 0 |
| ಪರಮಾಣು ಪ್ರಪಂಚ | 0 | 4 | 0 |
| ನೀತಿ ವಿನೋದ ಕತೆಗಳು | 0 | 12 | 0 |
| ಸಾಹಸ ಭೀಮ ವಿಜಯ | 0 | 8 | 0 |
| ಭಾರತದ ಗುರುಕುಲ | 0 | 6 | 0 |
| ಲತ್ತಪಗಡೆ | 0 | 6 | 0 |

